

# ಐದು ಮೂಕ ನಾಟಕಗಳು

ಚಿ. ಶ್ರೀನಿವಾಸರಾಜು

# IDU MŪKA NATAKAGALU

(Five Mime Plays)

C. SRINIVASARAJU
Department of Kannada, Christ College
Bangalore-560 029



First Published in November 1977

P. P. PRAKASHANA
8, 'Chiranjeevi', Old Swimming Pool Road,
Kodandaramapura, Bangalore-560 003



Pages : 54 + 10

Price Rs. 5/-

Cover : PRASANNA

Printed at Eastern Press, Bangalore-560 029

# ನನ್ನ ಮಾತು

ನಾನು ಸುಮಾರು ನಾಲ್ಕು ವರ್ಷಗಳ ಹಿಂದೆ ಬರೆದ ಕೆಲವು ಮೂಕ ನಾಟಕಗಳು ಈಗ ಪಿ. ಪಿ. ಪ್ರಕಾಶನದಿಂದ ಪ್ರಕಟವಾಗುತ್ತಿವೆ. ಇವುಗಳಲ್ಲಿ ಕೆಲವನ್ನು ಬೆಂಗಳೂರಿನ ನ್ಯಾಷನಲ್ ಕಾಲೇಜ್, ಎಂ. ಇ. ಎಸ್. ಕಾಲೇಜ್, ಕ್ರೈಸ್ಟ್‌ಕಾಲೇಜ್ ಮತ್ತು ದೆಹಲಿಯ ವಿದ್ಯಾರ್ಥಿಗಳು ಪ್ರಯೋಗಿಸಿದ್ದಾರೆ. ಅವರ ಪ್ರಯೋಗಗಳು ಅಲ್ಪಸ್ವಲ್ಪ ಬದಲಾವಣೆ ಮಾಡಲು ಸಹಾಯವಾದವು. 'ಏಳು ಮನುವಿನ ಮಗನೆ', 'ಫೀನಿಕ್ಸ್' ಮತ್ತು 'ಬೀಗದ ಕೈ' ನಾಟಕಗಳು 'ಥಿಯೇಟರ್'ನಲ್ಲಿ ಪ್ರಕಟವಾಗಿವೆ.

ಮೂಕ ನಾಟಕಗಳನ್ನು ಪುಸ್ತಕರೂಪದಲ್ಲಿ ಪ್ರಕಟಿಸುತ್ತಿರುವ ಈ ಸಂದರ್ಭದಲ್ಲಿ, ಅದರ ಇತಿ-ಮಿತಿಗಳನ್ನು ಅರಿತಿದ್ದೇನೆ. ಈ ರೀತಿಯ ನಾಟಕಗಳು ಫ್ರಾನ್ಸ್ ಮತ್ತು ಜರ್ಮನಿಯಲ್ಲಿ ಹೆಚ್ಚು. ನಮ್ಮಲ್ಲಿ ಮೂಕಾಭಿನಯ ವಿದೆಯೇ ಹೊರತು ಮೂಕ ನಾಟಕಗಳು ವಿರಳ. ಹಲವಾರು ಭಾಷೆಗಳ ಈ ದೇಶದಲ್ಲಿ ಸಮುದಾಯವನ್ನು ನೇರವಾಗಿ ತಲುಪಲು ಇವು ಸಮರ್ಥವಾಗಬಹುದೆಂದು ನನ್ನ ನಂಬಿಕೆ.

ಈ ನಾಟಕಗಳನ್ನು ಬರೆಯುವಾಗ, ಪ್ರಯೋಗಿಸುವಾಗ, ಪ್ರಕಟಿಸುವಾಗ ಆಸಕ್ತಿಯಿಂದ ಸಹಕರಿಸಿದ ಕ. ವೆಂ., ಕ. ನಂ., ಕಿ. ರಂ., ರಾಘು, ನಾಣಿ, ರಾವ್, ರಾಜಶೇಖರ್, ಶಂಕರಪ್ಪ, ಗಿರಿಧರ್, ಲಕ್ಷ್ಮೀನಾರಾಯಣ್, ಶಿವು ಮತ್ತು ಷಣ್ಮುಗಂ ಅವರಿಗೂ; ಪಿ. ಪಿ. ಪ್ರಕಾಶನದೊಂದಿಗೆ ಸಹಕರಿಸಿದ ಎಲ್ಲರಿಗೂ ನನ್ನ ಕೃತಜ್ಞತಾಪೂರ್ವಕ ವಂದನೆಗಳು.

೧೪-೧೧-೧೯೭೭

ಕನ್ನಡ ವಿಭಾಗ
ಕ್ರೈಸ್ಟ್‌ಕಾಲೇಜ್
ಬೆಂಗಳೂರು–೫೬೦ ೦೨೯

**ಚಿ. ಶ್ರೀನಿವಾಸರಾಜು**

# ಮುನ್ನುಡಿ

೧. ಮೂಕ ನಾಟಕ (MIME PLAY) ಎಂದರೇನು? ಸರಳವಾಗಿ ವಿವರಿಸುವುದಾದರೆ ಪಾತ್ರಧಾರಿಗಳ ನಡುವೆ ಭಾಷೆಯ ಮೂಲಕ ಸಂವಾದ, ಸಂಭಾಷಣೆಗಳು ನಡೆಯದ ನಾಟಕವನ್ನೇ ಮೂಕನಾಟಕವೆಂದು ಹೇಳಬಹುದು. ಇದನ್ನೇ ಪಾರಿಭಾಷಿಕವಾಗಿ ಹೀಗೆ ವಿವರಿಸಬಹುದು. ರೂಪಕ(PLAY)ವೊಂದರ ರಂಗನಿರ್ಮಿತಿಯಲ್ಲಿ ನಾಲ್ಕು ಮುಖ್ಯ ಅಂಗಗಳಿರುತ್ತವೆ. ಈ ಅಂಗಗಳನ್ನು ನಾಟ್ಯ ಶಾಸ್ತ್ರ 'ಅಭಿನಯ'ವೆಂದು ಹೆಸರಿಸುತ್ತದೆ. ಆಂಗಿಕ, ಸಾತ್ತ್ವಿಕ, ಆಹಾರ್ಯ ಮತ್ತು ವಾಚಿಕ ಎಂಬಿವೇ—ಆ ನಾಲ್ಕು ಅಭಿನಯಗಳು. ಇವುಗಳಲ್ಲಿ ಆಂಗಿಕ, ಸಾತ್ತ್ವಿಕಗಳೆರಡೂ ನಟನ ದೇಹಚಲನೆಗೆ ಸಂಬಂಧಿಸಿದವು. ಆಂಗಿಕವೆಂಬುದು ಆರೋಪಿತ ಭಂಗಿಯಾದರೆ ಸಾತ್ತ್ವಿಕವು ಮನುಷ್ಯ ಸಹಜ ಭಂಗಿಯಾಗಿರುತ್ತದೆ. ಆಹಾರ್ಯವೆಂದರೆ ನಟರ ಉಡಿಗೆತೊಡಿಗೆ ಮತ್ತು ರಂಗಸಜ್ಜಿಕೆ. ವಾಚಿಕವೇ ರೂಪಕದ ಭಾಷಿಕವಾದ ಭಾಗ. ನಟರು ಆಡುವ ಮಾತುಗಳು ಇದರಲ್ಲಿ ಸೇರುತ್ತವೆ. ಈ ನಾಲ್ಕೂ ಒಂದಕ್ಕೊಂದು ಪೂರಕವಾಗಿ ಸೇರಿದಾಗ ಮಾತ್ರ ರೂಪಕದ ರಂಗನಿರ್ಮಿತಿ ಯಶಸ್ವಿ ಎನಿಸುತ್ತದೆ. ಆದ್ದರಿಂದಲೇ ಓದು ನಾಟಕವೆಂಬ ಕಲ್ಪನೆ ಇಲ್ಲಿ ಸಲ್ಲ. ಏಕೆಂದರೆ ಆಗ ಲಭಿಸುವುದು ವಾಚಿಕ ಮಾತ್ರ. ಈ ಬಗೆಗೆ ಇನ್ನೂ ಸೂಕ್ಷ್ಮ ವಿವೇಚನೆ ಸಾಧ್ಯ. ಆದರೆ ಇಲ್ಲಿ ಅಪ್ರಸ್ತುತ. ನಾವು ಮೂಕ ನಾಟಕಗಳೆಂದು ಕರೆಯುವ ರೂಪಕಗಳು ವಾಚಿಕಾಭಿನಯವನ್ನು ಸಂಪೂರ್ಣವಾಗಿ ನಿರಾಕರಿಸುತ್ತವೆ. ಉಳಿದ ಮೂರು ಅಭಿನಯಗಳನ್ನೇ ಆಧರಿಸಿ ಈ ಬಗೆಯ ರೂಪಕವು ನಿರ್ಮಾಣಗೊಳ್ಳುತ್ತದೆ. ಈಗ ಏಳುವ ಪ್ರಶ್ನೆಯೆಂದರೆ ಸಹಜವಾದ ಸಂಪರ್ಕ ಮಾಧ್ಯಮವಾದ ಭಾಷೆಯನ್ನು ನಿರಾಕರಿಸುವುದು ಕೇವಲ ಪ್ರಯೋಗಶೀಲತೆಯೋ ಅಥವಾ ಅದರ ಪ್ರಯೋಜನಗಳೇನಾದರೂ ಇವೆಯೋ?

ಈ ಪ್ರಶ್ನೆಯ ಮೂಲಗ್ರಹಿಕೆಯೇ ಚರ್ಚಾರ್ಹ. ಭಾಷೆ ಸಹಜವಾದ ಸಂಪರ್ಕಮಾಧ್ಯಮವೆಂಬುದನ್ನು ಮುಗ್ಧ ಮನಸ್ಸು ಮಾತ್ರ ಒಪ್ಪಬಲ್ಲುದು. ವಾಸ್ತವವಾಗಿ ಮನುಷ್ಯರ ನಡುವಣ ಸಂಪರ್ಕ ತಲುಪಬಹುದಾದ ಸೂಕ್ಷ್ಮ ನೆಲೆಗಳಲ್ಲೆಲ್ಲಾ ಭಾಷೆ ನೆರವಿಗೆ ಬರಲಾರದೆಂಬುದು ಹಲವರ ಅನುಭವದ ಮಾತು. ಆಧುನಿಕ ನಾಟಕಗಳ ರಂಗ ನಿರ್ಮಿತಿಯನ್ನೇ ಗಮನಿಸಿದರೆ ಈ ಸಂಗತಿ ಸ್ಪಷ್ಟವಾಗುತ್ತದೆ. ನಾಟಕಕಾರನು ಬರೆದ ಮಾತುಗಳನ್ನು ಏರಿಳಿತಗಳೊಡನೆ ಉಚ್ಚರಿಸುವುದೇ ಮುಖ್ಯವಲ್ಲ. ಮಾತುಗಳ ನಡುವಣ ಮೌನ; ನಟರ ಚಲನವಲನ; ರಂಗಸನ್ನಿವೇಶ (ಬೆಳಕುವಿನ್ಯಾಸ) ಮತ್ತು ಪರಿಕರಗಳು ಇವೆಲ್ಲವೂ ಮುಖ್ಯವಾಗುತ್ತವೆ. ಎಂದರೆ ಕೇವಲ ಮಾತುಗಳಿಗೆ ಇಲ್ಲದ ಸಾಮರ್ಥ್ಯವನ್ನು ರೂಪಕಕ್ಕೆ ತುಂಬಿಕೊಡಲು ನಿರ್ದೇಶಕ ಯತ್ನಿಸುತ್ತಾನೆ, ಆದ್ದರಿಂದ ಮೂಕನಾಟಕಗಳಲ್ಲಿ ಮಾತಿಲ್ಲದೆ ಹೋಗುವುದು ಅಸಹಜವಾಗದೆ ಮಾನವ ಸಂಪರ್ಕದ ಸಾಧ್ಯತೆಗಳ ಶೋಧನೆಯಾಗುತ್ತದೆಯೆನ್ನಬೇಕು.

೨. ಹೆಲೆನಿಸ್ಟಿಕ್ ಸಂಸ್ಕೃತಿಯಲ್ಲಿ ಪೂರ್ಣಪ್ರಮಾಣದ ಮೂಕನಾಟಕಗಳಿದ್ದುದಕ್ಕೆ ದಾಖಲೆಗಳಿವೆ. ಗ್ರೀಕರ ಆದಿಮ ಕಲೆಯಾದ 'ತ್ರಿವಳಿಮೇಳ' (TRIUNE CHOREIA) ದಲ್ಲಿ ನೃತ್ಯ, ನಿರೂಪಣೆ, ಸಂಗೀತಗಳಿದ್ದವು. ಇವುಗಳೇ ಬೇರೆ ಬೇರೆಯಾಗಿ ಮುಂದೆ ಬೆಳೆದವು. ನಿರೂಪಣೆಯೇ ಮಾತಿನ ಭಾಗ. ಇದು ಮುಂದೆ ಬಂದು ಸೇರಿದುದು. ಅದಕ್ಕೆ ಮೊದಲು ಭಾವರೇಚಕ ಕ್ರಿಯೆಯನ್ನಪೇಕ್ಷಿಸುವ ನೃತ್ಯ ಮತ್ತು ವಾದ್ಯ ಸಂಗೀತಗಳು ಮಾತ್ರ ಇರುತ್ತಿದ್ದವು. ಇಲ್ಲಿಯೂ ತೆಳುವಾದ ಕಥಾವಿವರವಿರುತ್ತಿತ್ತು. ಆದರೆ ಅದು ಮಾತಿನಲ್ಲಿ ಹೊರಬೀಳುತ್ತಿರಲಿಲ್ಲ. ಸ್ಥೂಲವಾಗಿ ಇದು ಮೂಕ ನಾಟಕವೇ ಆಗಿದೆ. ಆದರೆ ಅದು ಮನು

ಷ್ಯನ ಬದುಕನ್ನು ಭಾಷೆ ತೀವ್ರವಾಗಿ ಆವರಿಸದಿದ್ದ ಅವಧಿಯದು. ಈಗ ಭಾಷೆಯನ್ನು ನಿರಾಕರಿಸುವುದು ಆವಶ್ಯಕವೆನಿಸಿದರೂ ಅಸಾಧ್ಯವೆನಿಸುವ ಕಾಲ. ಸಂಪರ್ಕಮಾಧ್ಯಮವನ್ನಾಗಿ ಭಾಷೆ ಏರ್ಪಡಿಸುವ ಅಸಂಗತ ಸನ್ನಿವೇಶವನ್ನು ನಿರೂಪಿಸಲು ಕೂಡ ಐಯನೆಸ್ಕೊ ಭಾಷೆಯನ್ನೇ ಬಳಸಿದ. ಆದ್ದರಿಂದ ಮೂಕ ನಾಟಕಗಳು ಸಾಧ್ಯತೆಯಾಗಿ ಸುಲಭವೆನಿಸಿದರೂ, ರಚನೆಯ ದೃಷ್ಟಿಯಿಂದ ಮಹತ್ವದ ಸವಾಲುಗಳಾಗುತ್ತವೆ.

ಮೂಕ ನಾಟಕಗಳೊಡನೆ ಹೋಲಿಸಬಹುದಾದ ಇನ್ನೆರಡು ಕಲಾಪ್ರಕಾರಗಳೆಂದರೆ ಅಪೆರಾ (Opera) ಮತ್ತು ಮೂಕಿ ಚಲನಚಿತ್ರಗಳು. ಸಂಗೀತ ಮತ್ತು ಸಿದ್ಧಮಾದರಿಯ (Stylized) ಆಂಗಿಕ ಅಭಿನಯಗಳನ್ನು ಅವಲಂಬಿಸುವ ಅಪೆರಾಗಳು; ಹಾಗೂ ಚಿತ್ರಿಕೆಗಳ ಚಲನೆಯ ಮೂಲಕವೇ ಸಂದರ್ಭವೊಂದನ್ನು ಸಂವಹನಗೊಳಿಸಲು ಯತ್ನಿಸುವ ಮೂಕಿ ಚಲನಚಿತ್ರ ಇವೆರಡೂ ಮೂಕ ನಾಟಕದ ಸಂವಾದಿ ಕಲೆಗಳು. ಮೂರರಕ್ಕೂ ಸಾಧ್ಯತೆ ಮತ್ತು ಆವಿಷ್ಕಾರಗಳು ಬೇರೆ ಬೇರೆಯಾಗಬಹುದಾದರೂ ತಾತ್ತ್ವಿಕವಾದ ನೆಲೆಮಾತ್ರ ಒಂದೇ ಎಂದು ಭಾವಿಸಲು ಶಕ್ಯವಿದೆ.

ಭಾಷೆಯ ಮಿತಿಗಳಿಲ್ಲದ ಮೂಕನಾಟಕಗಳು ಯಾವ ಭಾಷೆಯ ಪ್ರೇಕ್ಷಕನಿಗಾದರೂ ತಲುಪಬಲ್ಲುದು. ಹೀಗಿದ್ದರೂ ಈ ಪ್ರಕಾರಕ್ಕೆ ತನ್ನದೇ ಮಿತಿಗಳಿಲ್ಲವೆಂದಲ್ಲ. ತನ್ನ ಸಂವಹನ ಸಾಧ್ಯತೆಯ ವಿಸ್ತಾರದಿಂದಾಗಿ ಅದರ ಆಯ್ಕೆಗೆ ಸಿಗಬಹುದಾದ ವಸ್ತುಸಂದರ್ಭವೇ ಆ ಮಿತಿ. ತೀವ್ರ ವಿಸಂಗತಿಗಳಿಲ್ಲದ ಅಥವಾ ತೀರಾ ಆತ್ಮರತವಾದ ವಸ್ತುಸಂದರ್ಭಗಳನ್ನು ಮೂಕ ನಾಟಕ ಒಳಗೊಳ್ಳಲಾರದೇನೊ! ಇದು ಅಭಿನಯದ ಹೊಸ ಪ್ರಕಾರಗಳನ್ನು ರೂಢಿಸಿಕೊಂಡ ಹೊರತು ಸಾಧ್ಯವಾಗದ ಮಾತಾಗಿ ಉಳಿಯುತ್ತದೆ.

ಇಲ್ಲಿರುವ ಐದು ಮೂಕ ನಾಟಕಗಳೂ ಬೇರೆ ಬೇರೆ ವಸ್ತು ಸಂದರ್ಭಗಳನ್ನವಲಂಬಿಸಿವೆ. ಸಾಮಾಜಿಕ ಸನ್ನಿವೇಶದ ತೀವ್ರ ವಿಸಂಗತಿಗಳು ಐದು ರಚನೆಗಳನ್ನು ಆವರಿಸಿವೆ. ಈ ವಿಸಂಗತಿಗಳು 'ಕಣ್ಣಿಗೆ ರಾಚುವಷ್ಟು' ಸ್ಪಷ್ಟವಾಗಿರುವುದು ಒಂದು ನೆಲೆಯಲ್ಲಿ ಈ ಮೂಕ ನಾಟಕಗಳ ಸಂವಹನಶೀಲತೆಯನ್ನು ನಿಖರಗೊಳಿಸಿದೆ. 'ಎಳು ಮನುವಿನ ಮಗನೆ' ಮತ್ತು 'ಯೋಚಿಸಿ' ಎಂಬೆರಡು ರಚನೆಗಳ ಹಿಂದೆ ಆಶಾಚಿಂತನೆ ಇದೆ; ಸಂದರ್ಭವನ್ನು ಬೇರೆಯಾಗಿಸುವ ಯತ್ನವನ್ನು ನಾಟಕ ಹುಡುಕುತ್ತದೆ. 'ಬೀಗದ ಕೈ'ನಲ್ಲಿ ಮಾತು ಹೊರಬರಲು ನರಳುವುದು ಸಂದರ್ಭದಲ್ಲೇ ನಿರ್ಮಾಣಗೊಂಡಿದೆ. ಒಂದರ್ಥದಲ್ಲಿ ಪಂಜರದ 'ಬುಲ್‌ಬುಲ್' ನಂತಾಗಿದೆ ಅಲ್ಲಿ ಮಾತು. ನಾಟಕದ ಉದ್ದೇಶವೂ ಅದೇ ತಾನೆ. ಹೀಗೆಯೇ ಸಂದರ್ಭದ ನಿರ್ಮಿತಿಯ ಹಂತದಲ್ಲೇ ನಿಂತು ಅರ್ಥ ಪರಂಪರೆಗೆ ಅನುವು ಮಾಡಿಕೊಡುವ ಇನ್ನೊಂದು ರಚನೆ 'ಫೀನಿಕ್ಸ್'. ವಿಸಂಗತಿಯನ್ನು ಬಿಡಿಸುವಲ್ಲಿ 'ಮನೆಯೊಳಗಣಕಿಚ್ಚು' ಕೊಂಚ ಸರಳವಾದ ಮಾರ್ಗವನ್ನು ಹಿಡಿದುಬಿಟ್ಟಿದೆ. ಆಶಾಚಿಂತನೆ ಹೇಗೆ ಕೃತಿಯ ಸಂಕೀರ್ಣಗಳನ್ನು ನಯಗೊಳಿಸಿಬಿಡುತ್ತದೆಂಬುದಕ್ಕೆ ಈ ಕೃತಿ ನಿದರ್ಶನ. ಈ ಐದರಲ್ಲಿ ಕೆಲವು ಈಗಾಗಲೇ ಪ್ರಯೋಗಗಳನ್ನು ಕಂಡಿವೆ. ಬಳಸಬಹುದಾದ ಸಂಗೀತ ಮತ್ತು ಅಭಿನಯದ ಬಗೆಯನ್ನು ರಚನೆಯಲ್ಲಿ ಸೂಚಿಸಿಲ್ಲವಾದ್ದರಿಂದ ಅದು ರಂಗನಿರ್ಮಿತಿಕಾರನಿಗೆ ಅವಕಾಶಗಳನ್ನು ತಂದುಕೊಟ್ಟಿದೆ ಎನ್ನಬಹುದು.

ಕನ್ನಡ ಅಧ್ಯಯನ ಕೇಂದ್ರ **ಕೆ. ವಿ. ನಾರಾಯಣ**
ಬೆಂಗಳೂರು ವಿಶ್ವವಿದ್ಯಾಲಯ
ಬೆಂಗಳೂರು-೫೬೦೦೫೬

# ಪರಿವಿಡಿ

## ಪಾತ್ರಗಳು

ಚಿಕ್ಕವನು

ದೊಡ್ಡವನು

ಯುವಕ

ಯುವತಿ

ಕಾಕಾ

ಪೋಲಿಸ್

ಯಜಮಾನರು

ಪಾದ್ರಿ

ಹುಡುಗರು : ಹುಡುಗಿಯರು

# ಬೀಗದ ಕೈ

ರಂಗಮಂಚದ ಮೇಲೆ ಬೆಳಕು ಚೆಲ್ಲಿದಾಗ, ಸಾಜೆಯು ವಾತಾವರಣ. ಬೀದಿಯ ಮೂಲೆಯಲ್ಲಿ ಒಂದು ಹಳೆಯ ಪೆಟ್ಟಿಗೆಅಂಗಡಿ. ಅಂಗಡಿಯ ಮೇಲ್ಭಾಗದಲ್ಲಿ ಒಂದು ಬೋರ್ಡ್ ನೇತುಹಾಕಿದೆ. ಅದರ ಮೇಲೆ "ಇಂಡಿಯಾ ಟೈರ್ ವರ್ಕ್ಸ್", "ಭಾರತ್ ಬೀಗ ರಿಪೇರಿ ಅಂಗಡಿ" ಎಂದು ತಪ್ಪುತಪ್ಪಾಗಿ ಬರೆದಿದೆ. ಆ ಹಳೆಯ ಬೋರ್ಡು ಕೂಡಾ ಭದ್ರವಾಗಿಲ್ಲ. ಮೆಕ್ಕಾ ಮದೀನ ಚಿತ್ರಗಳಿರುವ ಹಳೆಯ ಕ್ಯಾಲೆಂಡರುಗಳನ್ನು ತೂಗುಹಾಕಲಾಗಿದೆ. ಸಿನಿಮಾ ಪ್ರದರ್ಶನದ ಜಾಹಿರಾತಿರುವ ಬಿದಿರು ತಡಿಕೆಯೊಂದು ಅಂಗಡಿಯ ಪಕ್ಕದಲ್ಲಿರುತ್ತದೆ. ಅಂಗಡಿಯ ಮುಂಭಾಗ ದಲ್ಲಿ ಒಂದು ಕಡೆ ಹಳೆಯ ಟೈರುಗಳು, ಟ್ಯೂಬುಗಳು ಬಿದ್ದಿರುತ್ತವೆ. ಅಂಗಡಿ ಬಾಗಿಲುರೆಕ್ಕೆಯ ಮೇಲೆ ಆಟೋ ವಾಹನಗಳ "ನೇಮ್‌ಪ್ಲೇಟ್"ಗಳನ್ನು ತೂಗುಹಾಕು ಲಾಗಿದೆ. ಅಂಗಡಿಯ ದಾಲಬಂದ್ರಕ್ಕೆ ನಾಲ್ಕೈದು ಬೀಗಗಳು, "ಬುಲ್‌ಬುಲ್" ಪಕ್ಷಿ ಇರುವ ಪಂಜರ, ಊಟವಿರುವ ಬಟ್ಟೆಯ ಬುತ್ತಿ ತೂಗುಹಾಕಲಾಗಿದೆ. ಅಂಗಡಿಯ ಮುಂಭಾಗದಲ್ಲಿ ನೀರು ತುಂಬಿದ ಹಳೆಯ 'ಟ್ಯಾಂಕು' ಬಿದ್ದಿರುತ್ತದೆ.

ಈ ಒಸ್ನೆಲೆಯಲ್ಲಿ ಸುಮಾರು ಹತ್ತು ಮತ್ತು ಇಪ್ಪತ್ತು ವರ್ಷದ ಇಬ್ಬರು ಕಾಣಿಸಿಕೊಳ್ಳುತ್ತಾರೆ. ಚಿಕ್ಕವನು ಮಾಸಿದ. ಹರಿದ ಚಡ್ಡಿ, ಷರಟನ್ನು ಹಾಕಿಕೊಂಡು ಅಂಗಡಿಯ ಮುಂದೆ, ಒಬ್ಬನೇ ಚಿನ್ನಿ-ದಾಂಡಲು ಆಟ ಆಡುತ್ತಿರುತ್ತಾನೆ. (ಅಥವಾ ಬಂಗ್ರದ ಆಟ ಆಡಬಹುದು). ಅವನು ಎಷ್ಟುಸಲ ಪ್ರಯತ್ನಿಸಿದರೂ ದಾಂಡಿನ ಹೊಡೆತಕ್ಕೆ ಚಿನ್ನಿ ಸಿಕ್ಕುವುದಿಲ್ಲ. ಸಿಕ್ಕಿದರೂ ಸರಿಯಾಗಿ ತಾಕದೆ ಅಲ್ಲಿಯೇ ಬೀಳುತ್ತದೆ. ಅವನು ಆಟದಲ್ಲಿಯೇ ತನ್ಮಯ ನಾಗಿರುತ್ತಾನೆ. ದೊಡ್ಡವನು ಸೈಕಲ್ ಟೈರಿನಿಂದ ಟ್ಯೂಬನ್ನು ತೆಗೆಯುವುದರಲ್ಲಿ ಯಶಸ್ವಿಯಾಗುತ್ತಾನೆ. ಆ ಸಮಯಕ್ಕೆ ಸರಿಯಾಗಿ ಪಕ್ಕದಲ್ಲೇ ಇರುವ ಸ್ಕೂಲ್ ಬಿಟ್ಟ ದೀರ್ಘ ಬೆಲ್ ಆಗುತ್ತದೆ. ಹುಡುಗರ "ಹೋ......" ಶಬ್ದ ಕೇಳುತ್ತದೆ. ದೊಡ್ಡವನು ಹರಿದ, ಕೊಳೆಯ ಪೈಜಾಮ ಮತ್ತು ಗುಂಡಿಯಿಲ್ಲದ ಉದ್ದನೆ. ದೊಗಳೆ ಷರಟು ಹಾಕಿ ಕೊಂಡಿರುತ್ತಾನೆ. ಕೆಲವು ವಿದ್ಯಾರ್ಥಿಗಳು ಪುಸ್ತಕಗಳನ್ನು ಹಿಡಿದುಕೊಂಡು ಅಂಗಡಿಯ ಮುಂದೆ ಹಾದುಹೋಗು ತ್ತಾರೆ. ದೊಡ್ಡವನು 'ಬೆಲ್' ಕೇಳಿದ ಕೂಡಲೇ, ತಾನು ತೆಗೆದಿದ್ದ ಸೈಕಲ್ ಟ್ಯೂಬನ್ನು ಹಿಡಿದುಕೊಂಡು ಬಂದು, ಆಟದಲ್ಲಿ ತನ್ಮಯನಾಗಿದ್ದ ತಮ್ಮನನ್ನು ಎಚ್ಚರಿಸಿ, ಗದರಿಸುವಂತೆ ನೋಡಿ, ಟ್ಯೂಬನ್ನು ಕೊಟ್ಟು, ಚೆಕ್ ಮಾಡುವಂತೆ ತಿಳಿಸಿ, ತಾನು ಆಸ್ಪತ್ರೆಗೆ ಹೋಗಬೇಕೆಂದೂ, ಚೆಕ್ ಮಾಡುವುದು ಮುಗಿದಕೂಡಲೆ ಅಂಗಡಿಗೆ ಬೀಗ ಹಾಕಿಕೊಂಡುಬರಬೇಕೆಂದೂ ಮೂಕಸನ್ನೆಯಲ್ಲಿ ತಿಳಿಸು ತ್ತಾನೆ. ಚಿಕ್ಕವನು ಅಣ್ಣ ಕೊಟ್ಟ ಸೈಕಲ್ ಟ್ಯೂಬನ್ನು ಕೊರಳಿನಲ್ಲಿ ತೂಗಿಸಿಕೊಂಡು, ಮತ್ತೆ ತನ್ನ ಆಟದಲ್ಲಿ ತನ್ಮಯನಾಗುತ್ತಾನೆ. ದೊಡ್ಡವನು ಊಟದ ಬುತ್ತಿ

ಯನ್ನು ತೆಗೆದುಕೊಂಡು. 'ಬುಲ್ ಬುಲ್' ಹಕ್ಕಿಗಳನ್ನು ಒಮ್ಮೆ ಮಾತನಾಡಿಸಿ ಹೊರಡುತ್ತಾನೆ. ತಮ್ಮ ಇನ್ನೂ ಆಟ ಆಡುತ್ತಿರುವುದನ್ನು ಗಮನಿಸಿ, "ಥುತ್... ತುಪಸ್ಸಾರಿ..." ಎಂದು ಬೈದು ಅವನ ತಲೆಯ ಮೇಲೆ ಮೊಟಕಿ. ಅವನ ಕೈಯಲ್ಲಿದ್ದ ಚಿನ್ನಿ-ದಾಂಡಲನ್ನು ಕಿತ್ತು ದೂರ ಎಸೆಯುತ್ತಾನೆ. ಚಿಕ್ಕವನು ಆಟದ ತನ್ಮಯತೆ ಯಿಂದ ವಂಚಿತನಾಗಿ. ಸಿಡುಕಿನಿಂದ ಕಾಲುಗಳನ್ನು ನೆಲಕ್ಕೆ ಬಡಿಯುತ್ತ, ಸೈಕಲ್ ಟ್ಯೂಬಿಗೆ ಗಾಳಿ ಊದಲು ಮೊದಲು ಮಾಡುತ್ತಾನೆ. ದೊಡ್ಡವನು ಹೊರಡುತ್ತಾನ. ಮೂರು ನಾಲ್ಕು ಜನ ವಿದ್ಯಾರ್ಥಿನಿಯರು ಕ್ರಿಕೆಟ್ ಸಮವಸ್ತ್ರವನ್ನು ಧರಿಸಿ. ಬ್ಯಾಟು, ಬಾಲನ್ನು ಹಿಡಿದುಕೊಂಡು, ತಮ್ಮಲ್ಲಿಯೇ ಹರಟೆ ಹೊಡೆದುಕೊಂಡು ಹಾದುಹೋಗುತ್ತಾರೆ. ಚಿಕ್ಕವನು ತನ್ನ ಕೆಲಸವನ್ನು ನಿಲ್ಲಿಸಿ, ಅವರು ಮರೆಯಾಗುವ ವರೆಗೂ ಅವರನ್ನೂ ಬಾಲು ಮತ್ತು ಬ್ಯಾಟುಗಳನ್ನು ಆಸೆತುಂಬಿದ ಕಣ್ಣುಗಳಿಂದ ನೋಡುತ್ತಾನೆ. ಮತ್ತೆ ಗಾಳಿ ತುಂಬಿದ ಟ್ಯೂಬಿನ ನೆಕ್ ಅನ್ನು ಅದುಮಿಕೊಂಡು ನೀರಿನ ಟ್ಯಾಂಕಿನಲ್ಲಿ ಅದನ್ನು ಅದ್ದಿ. ಪಂಕ್ಚರ್ ಆದ ಭಾಗಗಳನ್ನು ಪರೀಕ್ಷಿಸುತ್ತಾ. ಕೆಳಗೆ ಬಿದ್ದಿದ್ದ ಬೆಂಕಿಕಡ್ಡಿಗಳ ಸಹಾಯದಿಂದ ಅವುಗಳನ್ನು ಗುರುತು ಮಾಡುತ್ತಾನೆ.

೩

ಆ ವೇಳೆಗೆ ಸರಿಯಾಗಿ ಸ್ಕೂಟರ್ ಮೇಲೆ ಒಬ್ಬ ಯುವಕ ಬರುತ್ತಾನೆ. ಅತ್ಯಾಧುನಿಕ ರೀತಿಯಲ್ಲಿ ಅಲಂಕೃತನಾಗಿರುತ್ತಾನೆ. ಚಿಕ್ಕವನು ಸ್ಕೂಟರ್ ಬಂದಿದ್ದನ್ನು ನೋಡಿ. ಗುರುತುಮಾಡಿದ ಟ್ಯೂಬನ್ನು ಅಂಗಡಿಯ ಒಳಕ್ಕೆ ಎಸೆಯುತ್ತಾನೆ. ಆ ಯುವಕ ವಾಹನಕ್ಕೆ 'ಸೀಮ್‌ಸ್ಟ್ಯಾಂಡನ್ನು' ಹಾಕುವಂತೆ ಸೂಚಿಸಿ. ಅಣ್ಣ ಎಲ್ಲಿ

ಟಿಪ್ಪಣಿ

ಟಿಪ್ಪಣಿ

ಹೋಗಿರುವನೆಂದು ಮೂಕಸನ್ನೆಯಲ್ಲಿ ಕೇಳುತ್ತಾನೆ. ಅಣ್ಣ ಆಸ್ಪತ್ರೆಗೆ ಹೋದನೆಂದು ಚಿಕ್ಕವನು ತಿಳಿಸಿ. ನೇಮ್ ಪ್ಲೇಟನ್ನು ತಂದು ವಾಪಸಕ್ಕೆ ಜೋಡಿಸುತ್ತಾನೆ. ಆ ಸ್ಕೂಟರ್‌ಗೆ ದೂರಕ್ಕೆ ಕಾಣುವಂತೆ ಒಂದು ಹೆಸರನ್ನೂ ಅಂಟಿಸುತ್ತಾನೆ. ಯುವಕ ಈ ಸಮಯದಲ್ಲಿ ತನ್ನ ಮೀಸೆ. ಕ್ರಾಪು, ಬಟ್ಟೆಯನ್ನು ವಾಹನದ ಕನ್ನಡಿಯ ನೆರವಿನಿಂದ ಸರಿಮಾಡಿಕೊಳ್ಳುತ್ತಾನೆ. ಆ ಸಮಯಕ್ಕೆ ಯುವತಿಯೊಬ್ಬಳು ಹಾದುಹೋಗುತ್ತಾಳೆ. ಅವಳನ್ನು ನೋಡಿ ಯುವಕ ಪ್ರಚಲಿತ ಸಿನಿಮಾ ಗೀತೆಯನ್ನು ವಿಷಲ್ ಮಾಡುತ್ತಾನೆ. ಅನಂತರ ಯುವಕ ತನ್ನ ಜೇಬಿನಿಂದ ಐದು ರೂಪಾಯಿಗಳನ್ನು ಕೊಡುತ್ತಾನೆ. ಚಿಕ್ಕವನು ಇನ್ನೂ ಬೇಕೆಂದು ಸನ್ನೆ ಮಾಡುತ್ತಾನೆ. ಯುವಕ ಆಗುವುದಿಲ್ಲವೆಂದು ತಿಳಿಸಿ, ಸ್ಕೂಟರ್ ಸ್ಟಾರ್ಟ್ ಮಾಡು ತ್ತಾನೆ. ಚಿಕ್ಕವನು ಯುವಕನಿಗೆ ದುಂಬಾಲು ಬಿದ್ದು ತನ್ನನ್ನು ಒಂದು ರೌಂಡ್ ಹೊಡೆಸುವಂತೆ ಬೇಡಿಕೊಳ್ಳುತ್ತಾನೆ. ಅದಕ್ಕೆ ಅವನು ಒಪ್ಪಿ, ಚಿಕ್ಕವನನ್ನು ಕೂಡಿಸಿಕೊಂಡು ಹೊರಡುತ್ತಾನೆ. ಅವನು ಅತ್ಯಂತ ಖುಷಿಯಿಂದ ಮಹಾ ರಾಜನ ರೀತಿಯಲ್ಲಿ ಕುಳಿತುಕೊಳ್ಳುತ್ತಾನೆ.

೪

ಇವರು ಹೋದ ಒಂದೆರಡು ಕ್ಷಣಗಳಲ್ಲಿ ಒಬ್ಬ ಯುವತಿ ಆಯಾಸದಿಂದ ಸೈಕಲನ್ನು ನೂಕಿಕೊಂಡು ಬರುತ್ತಾಳೆ. ಅದರ ಹಿಂದಿನ ಚಕ್ರವನ್ನು ಇಬ್ಬರು ಹುಡುಗರು ಎತ್ತಿ ಕೊಂಡು ಬರುತ್ತಾರೆ. ಆ ಯುವತಿ ಅಂಗಡಿಯ ಮುಂಭಾಗಕ್ಕೆ ಬಂದು ಸ್ಟ್ಯಾಂಡ್ ಹಾಕಿ ನಿಲ್ಲಿಸುತ್ತಾಳೆ. ಆ ಹುಡುಗರಿಗೆ 'Thank you very much' ಎಂದು ಹೇಳಿದ ಮೇಲೆ ಅವರು ಹೊರಡುತ್ತಾರೆ. ಯುವತಿ

ಬೆವರನ್ನು ಕರವಸ್ತ್ರದಿಂದ ಒರೆಸಿಕೊಂಡು, ವಾಚನ್ನು ಒಮ್ಮೆ ನೋಡಿಕೊಂಡು. ಅಂಗಡಿಯ ಹುಡುಗನಿಗಾಗಿ ಹುಡುಕಾಡಿ. ಚಡಪಡಿಸಿ ನಿಟ್ಟುಸಿರುಬಿಡುತ್ತಾಳೆ. ಆ ಸಮಯಕ್ಕೆ ಸ್ಕೂಟರ್ ಯುವಕ ಚಿಕ್ಕವನನ್ನು ಕರೆದು ಕೊಂಡು ಬಂದು, ಯುವತಿ ಬೆಚ್ಚಿಬೀಳುವಂತೆ ಬ್ರೇಕ್‌ಹಾಕಿ. ಆಕೆ ಗಾಬರಿಯಾಗಿದ್ದನ್ನು ಗಮನಿಸಿ. ಖುಷಿಪಟ್ಟು, ಒಮ್ಮೆ ಹಾರನ್ ಮಾಡಿ. ವಿಷಲ್ ಹಾಕಿಕೊಂಡು ಹೊರಡುತ್ತಾನೆ. ಚಿಕ್ಕವನು ಯುವತಿಯನ್ನು ಏನೆಂದು ಕೇಳುತ್ತಾನೆ. ಸೈಕಲ್ ಬೀಗಹಾಕಿಕೊಂಡಿದೆ, ಬೀಗದ ಕೈ ಕಳೆದುಹೋಗಿದೆ ಎಂದು ಸನ್ನೆಯ ಮೂಲಕ ಯುವತಿ ತಿಳಿಸುತ್ತಾಳೆ. ಅವನು ತಕ್ಷಣ ಒಳಗೆ ಹೋಗಿ, ಒಂದು ಸಣ್ಣ ಕಂಬಿಯ ಕೊನೆಯನ್ನು ಸ್ವಲ್ಪ ತಟ್ಟಿ, ಸ್ವಲ್ಪ ಬಗ್ಗಿಸಿ. ಸೈಕಲ್ ಬೀಗಕ್ಕೆ ಹಾಕಿ ನಾಲ್ಕೈದು ಬಾರಿ ಪ್ರಯತ್ನಪಟ್ಟ ಮೇಲೆ ಬೀಗ ಬಿಚ್ಚಿಕೊಳ್ಳುತ್ತದೆ. ಅವನು ಹಿಂದಿನ ಸೈಕಲ್ ಚಕ್ರವನ್ನು ತಿರುಗಿಸುತ್ತಾನೆ. ತನ್ನ ಆಯುಧಗಳನ್ನು ಒಳಗಿಡುತ್ತಾನೆ. ಆ ಯುವತಿ ತನ್ನ ಚೀಲದಿಂದ ನಾಲ್ಕಾಣೆ ಎತ್ತಿಕೊಡುತ್ತಾಳೆ. ಚಿಕ್ಕವನು ಇನ್ನೂ ನಾಲ್ಕಾಣೆ ಬೇಕೆಂದು ಕೇಳಿ ಪಡೆದು ಕೊಳ್ಳುತ್ತಾನೆ. ಮೊದಲು ಕೊಟ್ಟ ನಾಲ್ಕಾಣೆಯನ್ನು ಮೇಲಿನ ಜೇಬಿನಲ್ಲೂ, ಅನಂತರ ಕೊಟ್ಟ ನಾಲ್ಕಾಣೆಯನ್ನು ನಿಕ್ಕರಿನ ಒಳಜೇಬಿನಲ್ಲೂ ಹಾಕಿಕೊಳ್ಳುತ್ತಾನೆ. ಆಮೇಲೆ ಸೈಕಲ್‌ಟ್ಯೂಬ್ ಎತ್ತಿಕೊಂಡು ಪಂಕ್ಚರ್ ಹಾಕಲು ಸಿದ್ಧಪಡಿಸಿಕೊಳ್ಳುತ್ತಾನೆ.

೫

"ಚಾ…ಚಾ…" ಎಂದು ಕೂಗಿಕೊಂಡು ಕೈ ಚಾದಂಗಡಿ ಯುವನು (ಕಾಕಾ) ಬರುತ್ತಾನೆ. ಅವನು ಒಂದು ಕೈಯಲ್ಲಿ ನೀರಿರುವ ಬಕೀಟನ್ನೂ, ಇನ್ನೊಂದು ಕೈಯಲ್ಲಿ ಅಗ್ಗಿಷ್ಟಿಕೆ

## ಟಿಪ್ಪಣಿ



೭

ಇರುವ ಟೀಪಾತ್ರೆಯನ್ನೂ ತೂಗಾಡಿಸಿಕೊಂಡು ಬರುತ್ತಾನೆ. ಅವನು ಗೆರೆಗೆರೆ ಷರಟು ಮತ್ತು ಬಣ್ಣಬಣ್ಣದ ಲುಂಗಿ ಉಟ್ಟುಕೊಂಡಿರುತ್ತಾನೆ. ತಲೆಗೊಂದು ಟವಲನ್ನು ಸುತ್ತಿ ಕೊಂಡಿರುತ್ತಾನೆ. ಚಿಕ್ಕಹುಡುಗ ಕೈತಟ್ಟಿ ಕಾಕನನ್ನು ಕರೆದು ಟೀಕೊಡುವಂತೆ ಹೇಳುತ್ತಾನೆ. ಅವನು ಚಿಕ್ಕವನಿಗೆ ಟೀ ಕೊಟ್ಟು, ಬೀಡಿಯಿಂದ ದಂ ಎಳೆಯುತ್ತಾ ಕುಕ್ಕರಗಾಲಿನಲ್ಲಿ ಕೂಡುತ್ತಾನೆ. ಚಿಕ್ಕವನು ಟೀ ಕುಡಿದ ಲೋಟವನ್ನು ಹಿಂತಿರುಗಿಸುತ್ತಾನೆ. ಅವನು ಅದನ್ನು ಬಕೀಟಿನ ನೀರಿನಲ್ಲಿ ಗಲಬರಿಸಿ, ತೊಳೆದು ಲೋಟವನ್ನು ಅದರಲ್ಲಿಯೇ ಹಾಕುತ್ತಾನೆ. ಚಿಕ್ಕವನು ಕಾಕನಿಗೆ ನಾಲ್ಕಾಣೆಯನ್ನು ನಿಕ್ಕರಿನ ಒಳಜೇಬಿನಿಂದ ತೆಗೆದು ಕೊಡುತ್ತಾನೆ. ಅವನು ಅದನ್ನು ನಡುವಿನಲ್ಲಿ ಸಿಕ್ಕಿಸಿ "ಚಾ...ಚಾ..." ಎಂದು ಕೂಗುತ್ತಾ ಹೊರಡುತ್ತಾನೆ.

೬

ಚಿಕ್ಕವನು ಮತ್ತೆ ಕೆಲಸಕ್ಕೆ ಕೂಡುವಷ್ಟರಲ್ಲಿ ಒಂದು Foot-ball ನೆಗೆದುಕೊಂಡು ಬಂದು ಇವನ ಅಂಗಡಿಯ ಹತ್ತಿರ ಬೀಳುತ್ತದೆ. ಚಿಕ್ಕವನು ಅದನ್ನು ಕೈಗೆ ತೆಗೆದು ಕೊಂಡು, ಪ್ರೀತಿಯಿಂದ ನೋಡಿ. ಪುಟವೇಳಿಸುತ್ತಾನೆ. ಆ ಹೊತ್ತಿಗೆ ಸಮವಸ್ತ್ರ ಧರಿಸಿದ ಒಬ್ಬ ಆಟಗಾರ ಇವನ ಮೇಲೆ ಎರಗಿಬಂದು ಚೆಂಡನ್ನು ಬಲವಂತವಾಗಿ ಕಿತ್ತು ಕೊಂಡು ಹೋಗುತ್ತಾನೆ. ಚಿಕ್ಕವನು ಅತ್ತಕಡೆಯೇ ನೋಡುತ್ತಾ ಅಂಗಡಿಯ ಒಳಗೆಹೋಗಿ 'ಬುಲ್ ಬುಲ್' ಪಂಜರವನ್ನು ಒಮ್ಮೆ ತಿರುಗಿಸಿ, ತನ್ನ ಕೆಲಸಕ್ಕೆ ಬಂದು ಕೂಡುತ್ತಾನೆ. ಏನನ್ನೋ ಜ್ಞಾಪಿಸಿ ಕೊಂಡವನಂತೆ ಥಟ್ಟನೆ ಎದ್ದು ಅಂಗಡಿಯ ಬೀಗದ ಕೈ ಹುಡುಕುತ್ತಾನೆ. ಅದು ಸಿಕ್ಕುವುದಿಲ್ಲ. ನೇತುಹಾಕಿದ್ದ ಬೀಗದ ಕೈ ಗೊಂಚಲಿಂದ ಒಂದು ಬೀಗದ ಕೈಯನ್ನು ತೆಗೆದು ಅರದಿಂದ

ಅದನ್ನು ಉಜ್ಜಲು ಪ್ರಾರಂಭಿಸುತ್ತಾನೆ. ಆ ಸಮಯಕ್ಕೆ ಸರಿಯಾಗಿ ಒಬ್ಬ ಪೋಲೀಸ್ ಪೇದೆ ಬೀಡಿ ಸೇದುತ್ತ ಬರುತ್ತಾನೆ. ಅವನು ಒಮ್ಮೆ ಸುತ್ತಲೂ ನೋಡಿ, ಅಂಗಡಿಯನ್ನು ಎತ್ತುವಂತೆ ಚಿಕ್ಕವನಿಗೆ ಹೇಳುತ್ತಾನೆ. ಬೂಟ್ಸ್‌ಕಾಲಿನಿಂದ ರಾಶಿಹಾಕಿದ್ದ ಟೈರುಗಳನ್ನು ಒದೆಯುತ್ತಾನೆ. ಚಿಕ್ಕವನು ಬೇಸರದಿಂದ ಮೇಲೆದ್ದು, ಅನಂತರ ಪೋಲೀಸಿನವನ ಮನ ಒಲಿಸುವ ರೀತಿಯಲ್ಲಿ ಪಕ್ಕಕ್ಕೆ ಕರೆದುಕೊಂಡು ಹೋಗಿ ಚಿಲ್ಲರೆಯನ್ನು ಕೈಗಿಟ್ಟು ವ್ಯಾಪಾರವಿಲ್ಲವೆಂದು. ಸನ್ನೆಯ ಮೂಲಕ ತಿಳಿಸುತ್ತಾನೆ. ಪೋಲೀಸಿನವನು ಚಿಲ್ಲರೆಯನ್ನು ಜೇಬಿಗೆ ಹಾಕಿಕೊಂಡು ಸುತ್ತ ನೋಡುತ್ತ ಕೃತಕನಗೆ ನಕ್ಕು ಮರೆಯಾಗುತ್ತಾನೆ. ಚಿಕ್ಕವನು ಮತ್ತೆ ತನ್ನ ಕೆಲಸದಲ್ಲಿ ತೊಡಗುತ್ತಾನೆ.

೨

ಆ ಹೊತ್ತಿಗೆ ವಯಸ್ಸಾದ, ಕಚ್ಚೆಪಂಚೆ ಉಟ್ಟ, ಯಜಮಾನರು ಕುಂಟುತ್ತಾ ಬಂದು ಮುಚ್ಚಿದ ಕೊಡೆಯನ್ನು ಚಿಕ್ಕವನ ಕೈಗೆ ಕೊಡುತ್ತಾರೆ. ಅದನ್ನು ತೆಗೆಯುವುದಕ್ಕೆ ಆಗುವುದಿಲ್ಲವೆಂದು ತಿಳಿಸುತ್ತಾರೆ. ಚಿಕ್ಕವನು ಅದನ್ನು ಪರೀಕ್ಷಿಸಿ ಒಂದು ಪಟಕಾರಿ (Cutting-player) ತಂದು, ಮೊಣಕಾಲಿನ ಮಧ್ಯೆ ಕೊಡೆಯನ್ನು ಇಟ್ಟುಕೊಂಡು ಅದನ್ನು ಸರಿಮಾಡುತ್ತಾನೆ. ಅದು ಸರಿಹೋದ ಮೇಲೆ ಕೊಡೆಯನ್ನು ಒಂದೆರಡು ಬಾರಿ ಮುಚ್ಚಿ ತೆಗೆದು, ಸರಿಯಾಗಿದೆ ಎಂದು ಖಚಿತವಾದ ಮೇಲೆ ಅದನ್ನು ಒಮ್ಮೆ ಗಿರ್ರನೆ ತಿರುಗಿಸಿ ತೃಪ್ತಿಯಿಂದ ಯಜಮಾನರ ಕೈಗೆ ಕೊಡುತ್ತಾನೆ. ಅದಕ್ಕೆ ಅವರು ನಾಲ್ಕಾಣೆ ಕೊಡುತ್ತಾರೆ. ಅದನ್ನು ಮತ್ತೆ ಅವರ ಕೈಯಲ್ಲಿ ಇಟ್ಟು ಎಂಟಾಣೆ ಕೊಡುವಂತೆ ಕೇಳುತ್ತಾನೆ. ಅವರು ಆಗುವು

## ಟಿಪ್ಪಣಿ

ಟಿಪ್ಪಣಿ

ದಿಲ್ಲವೆಂದು ಹೇಳಿ, ಕೊನೆಗೆ ಗೊಣಗುತ್ತಾ, ಎಂಟಾಣೆ ಕೊಡುತ್ತಾರೆ. ಚಿಕ್ಕವನು ನಾಲ್ಕಾಣೆಯನ್ನು ಮೇಲಿನ ಜೇಬಿಗೂ, ನಾಲ್ಕಾಣೆಯನ್ನು ನಿಕ್ಕರಿನ ಜೇಬಿಗೂ ಹಾಕಿ ಕೊಳ್ಳುತ್ತಾನೆ. ಯಜಮಾನರು ಕೊಡೆಯನ್ನು ಪರೀಕ್ಷಿಸಿ, ಸರಿಯಾಗಿದೆ ಎಂದು ಖಚಿತಪಡಿಸಿಕೊಂಡು ಕುಂಟುತ್ತಾ ಹೋಗುತ್ತಾರೆ. ಚಿಕ್ಕವನು ಮೊದಲು ಅವರಿಗೆ ಒಂದು ಸಲಾಂ ಹೊಡೆದು, ಅವರಿಗೆ ಕಾಣದಂತೆ ಅವರನ್ನು ಅಣಕಿಸುವ ರೀತಿಯಲ್ಲಿ ಕುಂಟುತ್ತಾ ಅಷ್ಟುದೂರ ಹೋಗಿ ಹಿಂತಿರುಗುತ್ತಾನೆ. "ಬುಲ್ ಬುಲ್" ಹಕ್ಕಿಗಳಿಗೆ ಕಾಳು ತಿನ್ನಿಸುತ್ತಾನೆ. ಟೈರ್‌ಚಕ್ರದೊಂದಿಗೆ ಆಟವಾಡುತ್ತಾನೆ. ತಟ್ಟನೆ ಜ್ಞಾಪಿಸಿಕೊಂಡವನಂತೆ ಅದನ್ನು ಅಲ್ಲೇ ಹಾಕಿ, ಅಂಗಡಿಯ ಬಾಗಿಲನ್ನು ಅರ್ಧ ಮುಚ್ಚಿ, ಹಳೆಯ ಟೈರುಗಳನ್ನು ಎತ್ತಿಡುವುದರಲ್ಲಿ ನಿರತನಾಗುತ್ತಾನೆ.

೮

ಅಷ್ಟರಲ್ಲೇ ಒಬ್ಬ ಪಾದ್ರಿ ಆತುರಾತುರವಾಗಿ ಬರುತ್ತಾನೆ. ತಾನು ತಂದ 'ಸೂಟ್‌ಕೇಸ್'ನ ಬೀಗ ತೆಗೆಯುವಂತೆ ಸೂಚಿಸುತ್ತಾನೆ. ಚಿಕ್ಕವನು ಬೇಜಾರಿನಿಂದ ಒಮ್ಮೆ ಆಕಳಿಸಿ, ನಿಧಾನವಾಗಿ ಚಾಣ, ಸುತ್ತಿಗೆ, ಕಂಬಿ, ಬೀಗದಕೈಗೊಂಚಲನ್ನು ಅಂಗಡಿಯಿಂದ ತೆಗೆದು ಕೊಂಡು ಬರುತ್ತಾನೆ. ಪಾದ್ರಿ ಒಮ್ಮೆ ಸುತ್ತಾ ನೋಡಿ, ಬೇಗ ಬೇಗ ಬೀಗ ತೆಗೆಯುವಂತೆ ಹೇಳುತ್ತಾನೆ. ಚಿಕ್ಕ ಹುಡುಗ ಸಾವಧಾನವಾಗಿ ಬೀಗದಕೈಗೊಂಚಲಿನ ಬೀಗದ ಕೈಗಳನ್ನು ಪರೀಕ್ಷಿಸಿ, ಒಮ್ಮೆ 'ಸೂಟ್‌ಕೇಸ್' ಅನ್ನು ಪರೀಕ್ಷಿಸಿ, ಬೀಗದ ಕೈಗಳಲ್ಲಿ ಒಂದನ್ನು ಆರಿಸಿ, ಅದನ್ನು ಸ್ವಲ್ಪ ಉಜ್ಜಿ ಒಂದೆರಡು ಏಟು ತಟ್ಟಿ ಸ್ವಲ್ಪ ಬಲಪ್ರಯೋಗದಿಂದ 'ಸೂಟ್‌ಕೇಸ್'ಗೆ ಹಾಕಿ ತಿರು

ವುತ್ತಾನೆ. 'ಸೂಟ್‌ಕೇಸ್' ದಿಢೀರನೆ ಬಿಚ್ಚಿಕೊಳ್ಳುತ್ತದೆ. ಆದರಿಂದ ವಿದೇಶಿ ಮದ್ಯದ ಒಂದೆರಡು ಬಾಟಲುಗಳು ಉರುಳುತ್ತವೆ. ಚಿಕ್ಕವನು ಒಂದನ್ನು ಎತ್ತಿಕೊಂಡು ಕುತೂಹಲದಿಂದ ನೋಡುತ್ತಾನೆ. ಪಾದ್ರಿ ತಟಕ್ಕನೆ ಅವನಿಂದ ಬಾಟಲನ್ನು ಕಿತ್ತುಕೊಂಡು 'ಸೂಟ್‌ಕೇಸ್'ನಲ್ಲಿ ಸೇರಿಸುತ್ತಾನೆ. ಅನಂತರ ಚಿಕ್ಕವನು ಹಾಕಿದ್ದ ಬೀಗದ ಕೈಯನ್ನು ಒಂದೆರಡು ಬಾರಿ ಪರೀಕ್ಷಿಸುತ್ತಾನೆ. ಸಮಾಧಾನವಾಗುತ್ತದೆ. ರಿಪೇರಿ ಹಣ ಎಷ್ಟೆಂದು ಕೇಳುತ್ತಾನೆ. ಚಿಕ್ಕವನು ಒಂದು ರೂಪಾಯಿ ಎಂದು ಹೇಳುತ್ತಾನೆ. ಆದರೆ ಪಾದ್ರಿ ಒಂದೊಂದು ರೂಪಾಯಿನ ಎರಡು ನೋಟುಗಳನ್ನು ಕೊಡುತ್ತಾನೆ. ಚಿಕ್ಕವನು ಅದರಲ್ಲಿ ಒಂದನ್ನು ಮೇಲಿನ ಅಂಗಿಯ ಜೇಬಿನಲ್ಲೂ. ಇನ್ನೊಂದನ್ನು ನಿಕ್ಕರಿನ ಜೇಬಿನಲ್ಲೂ ಇಟ್ಟುಕೊಳ್ಳುತ್ತಾನೆ. ಪಾದ್ರಿ ಹೋಗುವಾಗ 'ಬುಲ್ ಬುಲ್' ಹಕ್ಕಿಗಳ ಬಳಿಗೆ ಹೋಗಿ, ಅವನ್ನು ಮಾತನಾಡಿಸಿ ಹೊರಡುತ್ತಾನೆ. ಪಾದ್ರಿ ಅಷ್ಟು ದೂರ ಹೋಗಿ ಏನೋ ಜ್ಞಾಪಿಸಿಕೊಂಡು ವಾಪಸ್‌ಬಂದು ಚಿಕ್ಕವನಿಗೆ ಒಂದೆರಡು ಚಾಕಲೇಟುಗಳನ್ನೂ, ಒಂದು ಪುಸ್ತಕವನ್ನೂ ಕೊಡುತ್ತಾನೆ. ಚಿಕ್ಕವನು ಕೃತಜ್ಞತೆಯ ಸಲಾಂ ಮಾಡಲು, ಪಾದ್ರಿ ಟಾ-ಟಾ ಹೇಳಿ ಹೊರಡುತ್ತಾನೆ.

೬

ಚಿಕ್ಕವನು ಒಂದೆರಡು ಚಾಕಲೇಟುಗಳನ್ನು ಬಾಯಿಗೆ ಹಾಕಿಕೊಂಡು, ಪಾದ್ರಿ ಕೊಟ್ಟ ಪುಸ್ತಕವನ್ನು ಸುಮ್ಮನೆ ತಿರುವಿಹಾಕುತ್ತಾನೆ. ಏನೂ ಅರ್ಥವಾದಂತೆ ಕಾಣಿಸುವುದಿಲ್ಲ. ಅದನ್ನು ಮೇಲಕ್ಕೆ ಎಸೆದು 'ಬುಲ್ ಬುಲ್' ಹಕ್ಕಿಗಳಿಗೂ ಚಾಕಲೇಟನ್ನು ಮುರಿದು ಮುರಿದು

ಟಿಪ್ಪಣಿ

ಟಿಪ್ಪಣಿ

ಹಾಕುತ್ತಾನೆ. ಹಿನ್ನೆಲೆಯಲ್ಲಿ ಸೈರನ್ ಶಬ್ದ ಕೇಳಿಬರುತ್ತದೆ. ಚಿಕ್ಕವನು ಅಂಗಡಿಯ ಸಾಮಾನುಗಳನ್ನು ಎತ್ತಿಡುವ ಕಾರ್ಯದಲ್ಲಿ ನಿರತನಾಗುತ್ತಾನೆ. ಏನೋ ಹೊಳೆದಂತಾಗಿ, ಪಂಕ್ಚರ್ ಆದ ಸೈಕಲ್ ಟ್ಯೂಬಿಗೆ ಗಾಳಿ ತುಂಬಿ, ಅದಕ್ಕೆ ಸಿಕ್ಕಿದ ಬಿದಿರಿನ ನಳಿಗೆಯನ್ನು ಸಿಕ್ಕಿಸುತ್ತಾನೆ. ಅದು 'ಪೀ......' ಶಬ್ದ ಮಾಡಲು ಖುಷಿ ಪಡುತ್ತಾನೆ. ಹಿನ್ನೆಲೆಯಲ್ಲಿ ನಿಧಾನವಾಗಿ, ಮಸೀದಿಯ ಸಂಜೆಯ ನಮಾಜಿನ ಶಬ್ದ ಮೂಡಿಬರುತ್ತದೆ. ಚಿಕ್ಕವನು 'ಬುಲ್ ಬುಲ್' ಹಕ್ಕಿಗಳ ಪಂಜರವನ್ನು ಎತ್ತಿಕೊಂಡು ನೋಡುತ್ತಿರುತ್ತಾನೆ.

## ೧೦

ಹಿನ್ನೆಲೆಯಲ್ಲಿ 'ಅಕ್ಬರ್......ಅಕ್ಬರ್' ಎನ್ನುವ ಶಬ್ದ ಬರುಬರುತ್ತಾ ಹೆಚ್ಚಿ ದೊಡ್ಡವನು ಓಡಿಬಂದು ಅಳುತ್ತಾ ಕಾಣಿಸಿಕೊಳ್ಳುತ್ತಾನೆ. ಅವನ ಮುಖದಲ್ಲಿ ಹೊಣೆಗಾರಿಕೆ ಗಾಬರಿ, ದುಃಖ, ಭಯ ಆವರಿಸಿರುತ್ತದೆ. ಚಿಕ್ಕವನಿಗೆ ದೊಡ್ಡವನ ಕೂಗು ಕೇಳಿಸಿರುವುದಿಲ್ಲ. 'ಬುಲ್‌ಬುಲ್' ಹಕ್ಕಿಗಳ ಜೊತೆಗೆ ಆಟವನ್ನು ಮುಂದುವರಿಸಿರುತ್ತಾನೆ. ದೊಡ್ಡವನು ಚಿಕ್ಕವನನ್ನು ಸೆಳೆದು, ತಂದೆ ಆಸ್ಪತ್ರೆಯಲ್ಲಿ ತೀರಿಹೋದರು ಎಂದು ಸನ್ನೆಮಾಡಿ ತಿಳಿಸುತ್ತಾನೆ. ಚಿಕ್ಕವನು ಪಂಜರವನ್ನು ಕೆಳಗೆ ಬಿಟ್ಟು ಅಸಹಾಯಕತೆಯಿಂದ ಅಳುತ್ತಾನೆ. ದೊಡ್ಡವನು ಅಂಗಡಿಯನ್ನು ಮುಚ್ಚಿ, ಚಿಕ್ಕವನನ್ನು ತಬ್ಬಿಕೊಂಡು ನಿಧಾನವಾಗಿ ಕರೆದೊಯ್ಯುತ್ತಾನೆ. ಬೆಳಕು ಕೊನೆಯಲ್ಲಿ ಅಂಗಡಿಯ ಹೆಸರಿನ ಮೇಲೆ, 'ಬುಲ್ ಬುಲ್' ಪಂಜರದ ಮೇಲೆ ಕೇಂದ್ರೀಕೃತವಾಗಿ, ಕ್ಷೀಣಿಸುತ್ತದೆ. ಹಿನ್ನೆಲೆಯ ನಮಾಜಿನ ಧ್ವನಿಯೂ ಕ್ಷೀಣಿಸುತ್ತದೆ.

-ತೆರೆ-

## ಪಾತ್ರಗಳು

ವ್ಯಕ್ತಿ–೧
ರಾಜಕಾರಣಿ
ಸಮವಸ್ತ್ರದ ವ್ಯಕ್ತಿ
ವ್ಯಾಪಾರಿ
ಯುವತಿ
ಮುದುಕ
ಚಿಕ್ಕ ಹುಡುಗ
ವ್ಯಕ್ತಿ–೨

# ಫೀನಿಕ್ಸ್



ರಂಗಮಂಚದ ಮೇಲೆ ನಿಧಾನವಾಗಿ ಬೆಳಕು ಮೂಡುತ್ತದೆ. ದುಃಖಸೂಚಕ ವಾದ್ಯಸಂಗೀತ ಹಿನ್ನೆಲೆಯಲ್ಲಿ ಮೆಲ್ಲಗೆ ಕೇಳಿಬರುತ್ತದೆ. ರಂಗಮಂಚ ಸಂಪೂರ್ಣವಾಗಿ ಕಪ್ಪು ಪರದೆಗಳಿಂದ ಅಲಂಕೃತವಾಗಿದೆ. ಮಧ್ಯಭಾಗದಲ್ಲಿ ಉದ್ದನೆಯ ಮೇಜು. ಅದರಮೇಲೆ ಬಿಳಿಯಬಟ್ಟೆ ಹರಡಿದೆ. ತೆರೆದ ಅಲಂಕೃತ ಶವದ ಪೆಟ್ಟಿಗೆಯನ್ನು ಮೇಜಿನ ಮೇಲೆ ಇಟ್ಟಿದೆ. ಶವದ ಪೆಟ್ಟಿಗೆಯ ಮುಚ್ಚಳವನ್ನು ಮುಂಭಾಗದ ಮೇಜಿನ ಕಾಲುಗಳಿಗೆ ಒರಗಿಸಲಾಗಿದೆ. ಶವದ ಪೆಟ್ಟಿಗೆಯ ಮುಕ್ಕಾಲುಭಾಗವನ್ನು ಧ್ವಜದಿಂದ ಮುಚ್ಚಿರುತ್ತಾರೆ. ಶವದ ಪೆಟ್ಟಿಗೆಯ ಮುಚ್ಚಳಕ್ಕೆ ಒಂದು 'ರೀತ್' (wreath) ಅನ್ನು ಒರಗಿಸಿರುತ್ತಾರೆ. ರಂಗಮಂಚದ ಬಲಭಾಗದಲ್ಲಿ ಒಂದು ಮೇಜು. ಅದರ ಮೇಲೂ ಬಿಳಿ ಬಟ್ಟೆ ಹರಡಿರುತ್ತದೆ. ಅದರ ಮೇಲೆ ದೊಡ್ಡ, ತೆರೆದ ಪುಸ್ತಕ. ಮೇಜಿನ ಮುಂದೆ ಒಂದು ಹಳೆಯ ಕಾಲದ ಕುರ್ಚಿ. ಶವದ ಪೆಟ್ಟಿಗೆಯ ತಲೆಭಾಗದಲ್ಲಿ ಒಂದು ಚಿಕ್ಕ 'ಸ್ಟೂಲು.' ಅದರ ಮೇಲೆ ಸಾಧಾರಣ ಉಡುಪು ಧರಿಸಿದ ೨೦-೨೫ ವರ್ಷದ ವ್ಯಕ್ತಿ ತಲೆತಗ್ಗಿಸಿಕೊಂಡು ಕುಳಿತಿರುತ್ತಾನೆ. ಪುಸ್ತಕವಿರುವ ಮೇಜಿನ ಮೇಲೆ ಕಾಗದದ

ಟಿಪ್ಪಣಿ

ಹೂಗಳ ಹೂಜಿ ಇಟ್ಟಿರುತ್ತಾರೆ. ಒಂದು ಕ್ಯಾಲೆಂಡರನ್ನು ಎಲ್ಲರಿಗೂ ಕಾಣುವಂತೆ ಒಂದು ಕಡೆ ನೇತುಹಾಕಿರುತ್ತಾರೆ. ಊದುಕಡ್ಡಿಯ ಹೊಗೆ ಮಂದವಾಗಿ ಆವರಿಸಿರುತ್ತದೆ.

೨

ಸ್ವಲ್ಪ ಸಮಯದ ನಂತರ, ಖಾದಿ ಉಡುಪನ್ನು ಧರಿಸಿ, ಕಪ್ಪುಕನ್ನಡಕವನ್ನು ಹಾಕಿಕೊಂಡು, ಸುಮಾರು ೪೦-೪೫ ವರ್ಷಗಳ ಒಬ್ಬ ವ್ಯಕ್ತಿ ಠೀವಿಯಿಂದ ಆಗಮಿಸುತ್ತಾನೆ. ಅವನ ಹಿಂದೆ ಇನ್ನೊಬ್ಬ ಸಮವಸ್ತ್ರದ ವ್ಯಕ್ತಿ ಒಂದು ರೀತ 'ನ್ನು ತೆಗೆದುಕೊಂಡು ವಿಧೇಯನಾಗಿ ಬರುತ್ತಾನೆ. ಆ ವ್ಯಕ್ತಿ ಶವದ ಪೆಟ್ಟಿಗೆಯನ್ನು ಸಮೀಪಿಸುವ ಮೊದಲು ಚಪ್ಪಲಿಗಳನ್ನು ದೂರದಲ್ಲಿ ಬಿಟ್ಟು, ಗಂಭೀರಭಾವದಿಂದ 'ರೀತ 'ನ್ನು ತೆಗೆದುಕೊಂಡು ಹಿಂದಿನ 'ರೀತ್ 'ನ ಪಕ್ಕದಲ್ಲಿಯೇ ಇಡುತ್ತಾನೆ. ಶವದ ಪೆಟ್ಟಿಗೆಯನ್ನು ಒಮ್ಮೆ ನೋಡಿ, ಸಂಗಡಿಗನ ಮುಖವನ್ನು ಒಮ್ಮೆ ನೋಡಿ, ತಲೆ ತಗ್ಗಿಸಿಕೊಂಡು ಕುಳಿತಿದ್ದ ವ್ಯಕ್ತಿಯ ಕಡೆಗೆ ಬರುತ್ತಾನೆ. ಏನೋ ಮರೆತವನಂತೆ ಹಿಂದಿರುಗಿ ಬಂದು 'ರೀತ್' ಮೇಲೆ ಗುರುತಿನ ಚೀಟಿ ಇದೆಯೋ ಇಲ್ಲವೋ ಎಂದು ಪರೀಕ್ಷಿಸಿ, ಸಮಾಧಾನದಿಂದ ಉಸಿರೆಳೆದು ಮತ್ತೆ ಪುಸ್ತಕದ ಮೇಜಿನ ಬಳಿಗೆ ಬರುತ್ತಾನೆ. ತನ್ನ ಅಂಗಿ ಜೇಬುಗಳನ್ನು ತಡಕಾಡುತ್ತಾನೆ. ಅವನ ಸಂಗಡಿಗ ತನ್ನ ಪೆನ್ನನ್ನು ತೆಗೆದು ಕೊಡಲು, ಸಹಿ ಮಾಡಿ ಅದನ್ನು ತನ್ನ ಜೇಬಿಗೆ ಸಿಕ್ಕಿಸಿಕೊಳ್ಳಲು ಹೋಗುತ್ತಾನೆ. ಆದರೆ ಸಂಗಡಿಗ ಸನ್ನೆಯಿಂದ ಅದನ್ನು ಕೇಳಿ ಪಡೆಯುತ್ತಾನೆ. ಅನಂತರ ವ್ಯಕ್ತಿ ಚಪ್ಪಲಿಯನ್ನು ಹಾಕಿಕೊಂಡು ಶವಪೆಟ್ಟಿಗೆಗೆ ವಂದಿಸಿ ನಿರ್ಗಮಿಸುತ್ತಾನೆ. ಅವನ ಹಿಂದೆ ಸಂಗಡಿಗನೂ ತೆರಳುತ್ತಾನೆ.

೩

ಟಿಪ್ಪಣಿ

ಕೆಲವೇ ನಿಮಿಷಗಳ ನಂತರ ವ್ಯಾಪಾರಿಯಂತೆ ಕಾಣುವ ಆಸಾಮಿ ಬರುತ್ತಾನೆ. ಅವನು ಕನ್ನಡಕವನ್ನು ಧರಿಸಿರುತ್ತಾನೆ. ನಿಧಾನವಾಗಿ ಬಂದು ತನ್ನ 'ಬ್ರೀಫ್‌ಕೇಸ್' ಅನ್ನು ಒಂದು ಪಕ್ಕದಲ್ಲಿ ಇಟ್ಟು, ಷೂ ಬಿಚ್ಚಿ ಶವದ ಪೆಟ್ಟಿಗೆಯ ಬಳಿಗೆ ಬರುತ್ತಾನೆ. ಅದನ್ನು ಒಮ್ಮೆ ದುಃಖಭಾವದಿಂದ ನೋಡಿ, ತನ್ನ ಕನ್ನಡಕವನ್ನು ತೆಗೆದು ಕರವಸ್ತ್ರದಿಂದ ಕಣ್ಣುಗಳನ್ನು ಒರೆಸಿಕೊಳ್ಳುತ್ತಾನೆ. ನಿಟ್ಟುಸಿರುಬಿಟ್ಟು ಕನ್ನಡಕವನ್ನು ಮತ್ತೆ ಧರಿಸಿ ತಲೆತಗ್ಗಿಸಿಕೊಂಡು ಕುಳಿತಿದ್ದ ವ್ಯಕ್ತಿಯ ಬಳಿಗೆ ಬರುತ್ತಾನೆ. ಅವನ ಕೈಗಳನ್ನು ಒಮ್ಮೆ ಮೃದುವಾಗಿ ಅದುಮಿ, ತನ್ನ ಜೇಬಿನಿಂದ 'ನೋಟು' ಗಳನ್ನು ತೆಗೆದು ಎಲ್ಲರಿಗೂ ಕಾಣಿಸುವಂತೆ ಅವನ ಜೇಬಿಗೆ ಇಡುತ್ತಾನೆ. ಕುಳಿತಿದ್ದ ವ್ಯಕ್ತಿಯ ಬೆನ್ನನ್ನು ತಟ್ಟಿ, ಪುಸ್ತಕದ ಮೇಜಿನ ಬಳಿಗೆ ಬಂದು, ಸಹಿ ಮಾಡಿ, ಬಿಟ್ಟಿದ್ದ ಷೂ ಹಾಕಿಕೊಂಡು, 'ಬ್ರೀಫ್‌ಕೇಸ್'ಅನ್ನು ತೆಗೆದುಕೊಂಡು ಗಂಭೀರನಾಗಿ ಹೊರಡುತ್ತಾನೆ.



ಸ್ವಲ್ಪ ಕಾಲವಾದ ಮೇಲೆ, ಆಧುನಿಕವಾಗಿ ಅಲಂಕರಿಸಿಕೊಂಡಿರುವ ಸುಂದರ ಯುವತಿ ಬರುತ್ತಾಳೆ. ಒಮ್ಮೆ ಶವದ ಪೆಟ್ಟಿಗೆಯ ಕಡೆಗೆ ದೃಷ್ಟಿಸಿ ನೋಡುತ್ತಾಳೆ. ಚಪ್ಪಲಿಯನ್ನು ದೂರದಲ್ಲಿ ಬಿಟ್ಟು ಶವದ ಪೆಟ್ಟಿಗೆಯ ಬಳಿಗೆ ಬರುತ್ತಾಳೆ. ತನ್ನ 'ವ್ಯಾನಿಟಿ' ಬ್ಯಾಗಿನಿಂದ ಬಿಡಿ ಹೂಗಳನ್ನು ತೆಗೆದು, ಭಕ್ತಿಯಿಂದ ಶವದ ಪೆಟ್ಟಿಗೆಯ ಮೇಲೆ ಹಾಕುತ್ತಾಳೆ. ಅನಂತರ ಒಂದು ಮೇಣದಬತ್ತಿ ಹೊರ ತೆಗೆದು ಶವದ ಪೆಟ್ಟಿಗೆಯ ತಲೆಯ ಭಾಗದಲ್ಲಿ ಹಚ್ಚುತ್ತಾಳೆ.

ಟಿಪ್ಪಣಿ

ಅದುವರೆಗೂ ತಲೆತಗ್ಗಿಸಿಕೊಂಡು ಕುಳಿತಿದ್ದ ವ್ಯಕ್ತಿ ಈ ಯುವತಿ ಬಂದಾಗಿನಿಂದ ಅವಳ ಕಡೆ ದೃಷ್ಟಿಯನ್ನು ಕೇಂದ್ರೀಕರಿಸಿ. ಯುವತಿಯನ್ನು ಹೀರುವಂತೆ ನೋಡು ತ್ತಿರುತ್ತಾನೆ. ಮೇಣದ ಬತ್ತಿ ಹಚ್ಚುವವರೆಗೂ ಇದನ್ನು ಆ ಯುವತಿ ಗಮನಿಸಿರುವುದಿಲ್ಲ. ಅನಂತರ ಯುವಕನ ನೋಟವನ್ನು ಗಮನಿಸಿ, ಗಾಬರಿಯಿಂದ ಚಪ್ಪಲಿಗಳ ಬಳಿಗೆ ಓಡುತ್ತಾಳೆ. ಏನನ್ನೋ ಜ್ಞಾಪಿಸಿಕೊಂಡು, ಪುಸ್ತಕದಲ್ಲಿ ಸಹಿಹಾಕಿ, ಚಪ್ಪಲಿಗಳನ್ನು ಹಾಕಿಕೊಂಡು ಯುವಕನನ್ನು ಒಮ್ಮೆ ನೋಡಿ ಓಡುತ್ತಾಳೆ. ಯುವಕ ಮೊದಲಿನಂತೆ ತಲೆತಗ್ಗಿಸಿಕೊಂಡು ಕೂಡುತ್ತಾನೆ.

೨೫

ಸ್ವಲ್ಪ ಸಮಯದ ನಂತರ ಒಬ್ಬ, ದೊಗಲೆ ಷರಾಯಿ, ಕೋಟು ಮತ್ತು ಹ್ಯಾಟನ್ನು ಧರಿಸಿಕೊಂಡು, ಚಿಕ್ಕ ಹುಡುಗನ ಕೈಹಿಡಿದುಕೊಂಡು ನಿಧಾನವಾಗಿ ಬರುತ್ತಾನೆ. ಮುದುಕ ಷರಾಯಿಯ ಕೆಳಭಾಗವನ್ನು ಮೇಲಕ್ಕೆ ಮಡಿ ಚಿರುತ್ತಾನೆ. ಚಿಕ್ಕಹುಡುಗ ಒಂದೇ ಕೈಯಲ್ಲಿ ಐಸ್‌ಕ್ರೀಮ್ ಮತ್ತು ಚೆಂಡು ಹಿಡಿದುಕೊಂಡಿರುತ್ತಾನೆ. ಐಸ್‌ಕ್ರೀಮ್ ಚೀಪುತ್ತಾ ಕುತೂಹಲದಿಂದ ಎಲ್ಲವನ್ನೂ ನೋಡುತ್ತಿರು ತ್ತಾನೆ. ಮುದುಕ ಸಾಕ್ಸ್ ಇಲ್ಲದ ಷೂ ಕಳಚಿ ಪಕ್ಕಕ್ಕೆ ಇಡುತ್ತಾನೆ. ಚಿಕ್ಕ ಹುಡುಗನೂ ತನ್ನ ಚಪ್ಪಲಿಗಳನ್ನು ಅಲ್ಲಿಯೇ ಬಿಡುತ್ತಾನೆ. ಮುದುಕ ಹುಡುಗನ ಕೈಯನ್ನು ಬಿಟ್ಟು ನಿಧಾನವಾಗಿ ಶವದ ಪೆಟ್ಟಿಗೆಯ ಬಳಿ ಬರುತ್ತಾನೆ. ಹ್ಯಾಟ್ ತೆಗೆದು ಪಕ್ಕದಲ್ಲಿ ಇಡುತ್ತಾನೆ. ಶವದ ಪೆಟ್ಟಿಗೆ ಯನ್ನು ಕಂಡು ದೀರ್ಘವಾದ ನಿಟ್ಟುಸಿರುಬಿಟ್ಟು ಆಕಾಶದ ಕಡೆಗೆ ಕೈಗಳನ್ನು ಚಾಚುತ್ತಾನೆ. ಚಿಕ್ಕಹುಡುಗ ಒಂದು

ಕೈಯಲ್ಲಿ ಐಸ್‌ಕ್ರೀಮ್ ಚೀಪುತ್ತಾ, ಮತ್ತೊಂದು ಕೈಯಲ್ಲಿ ಚೆಂಡನ್ನು ಪುಟ ಎಗರಿಸುತ್ತಾ ಆಟವಾಡುತ್ತಿರುತ್ತಾನೆ. ಮುದುಕ ಮೊಣಕಾಲೂರಿ ಎದೆಯ ಭಾಗದಲ್ಲಿ ಶಿಲುಬೆಯ ಸಂಜ್ಞೆ ಮಾಡಿ ಪ್ರಾರ್ಥಿಸುತ್ತಾನೆ. ಚಿಕ್ಕಹುಡುಗ ಕುತೂಹಲದಿಂದ, ತಲೆತಗ್ಗಿಸಿಕೊಂಡು ಕುಳಿತಿದ್ದ ಯುವಕನ ಮುಖವನ್ನು ಬಾಗಿ ಬಾಗಿ ನೋಡಿ, ತನ್ನ ಕೆಲಸದಲ್ಲಿ ನಿರತನಾಗುತ್ತಾನೆ. ಒಮ್ಮೆ ಮೇಜಿನ ಮೇಲಿದ್ದ ಪುಸ್ತಕದ ಹಾಳೆಗಳನ್ನು ಸುಮ್ಮನೆ ತಿರುವಿಹಾಕಿ ಬರುತ್ತಾನೆ. ಮುದುಕ ನಿಧಾನವಾಗಿ ಎದ್ದು ಮತ್ತೊಮ್ಮೆ ಶವದ ಪೆಟ್ಟಿಗೆಯನ್ನು ನೋಡಿ ನಿಟ್ಟುಸಿರು ಬಿಟ್ಟು ತಲೆತಗ್ಗಿಸಿಕೊಂಡು ಕುಳಿತಿದ್ದ ಯುವಕನ ಬಳಿಗೆ ಬಂದು ಪ್ರೀತಿಯಿಂದ ಅವನ ತಲೆಯನ್ನು ನೇವರಿಸುತ್ತಾನೆ. ಅಷ್ಟರಲ್ಲಿ ಪುಟವೆಗರಿಸುತ್ತಿದ್ದ ಚೆಂಡು ಶವದ ಪೆಟ್ಟಿಗೆಯನ್ನು ಸೇರುತ್ತದೆ. ಚಿಕ್ಕಹುಡುಗ ಪೆಚ್ಚು ಮೋರೆ ಹಾಕಿಕೊಂಡು, ದಿಗಿಲಿನಿಂದ ಮುದುಕನ ಕಡೆ ನೋಡಿ, ಶವದ ಪೆಟ್ಟಿಗೆಯಲ್ಲಿ ಚೆಂಡು ಬಿತ್ತೆಂದು ತಿಳಿಸುತ್ತಾನೆ. ಮುದುಕ ಹ್ಯಾಟನ್ನು ಇಟ್ಟುಕೊಂಡು, ಕೋಪ ಮಾಡಿಕೊಂಡವನಂತೆ ಹುಡುಗನ ಬಳಿ ಬರುತ್ತಾರೆ. ಚಿಕ್ಕ ಹುಡುಗ ಏನೋ ಹೇಳಲು ಬಾಯಿ ತೆರೆಯಲು, ಮುದುಕ ಹುಡುಗನ ಬಾಯನ್ನು ಮುಚ್ಚಿ, ಸುಮ್ಮನಿರುವಂತೆ ಸೂಚಿಸಿ ಚಪ್ಪಲಿ ಹಾಕಿಕೊಂಡು, ಹುಡುಗನನ್ನು ಕರೆದುಕೊಂಡು ಹೋಗುತ್ತಾನೆ. ಹುಡುಗ ಒಲ್ಲದ ಮನಸ್ಸಿನಿಂದ ಹೆಜ್ಜೆ ಹಾಕುತ್ತಾ, ಹಿಂತಿರುಗಿ ನೋಡುತ್ತಾ, ಬಲವಂತವಾಗಿ ಚಪ್ಪಲಿಗಳನ್ನು ಎಳೆದುಕೊಂಡು, ಐಸ್‌ಕ್ರೀಮ್ ಚೀಪುತ್ತಾ ಹೋಗುತ್ತಾನೆ.

೬

ಇದಾದ ಸ್ವಲ್ಪ ಸಮಯದಲ್ಲಿ, ನಿಧಾನವಾಗಿ ಹಿನ್ನೆಲೆಯಲ್ಲಿ ಮೂಡಿಬರುತ್ತಿದ್ದ ದುಃಖಸೂಚಕ ವಾದ್ಯಸಂಗೀತ

## ಟಿಪ್ಪಣಿ

## ಟಿಪ್ಪಣಿ

ಕ್ಷೀಣಿಸುತ್ತದೆ. ಲಯಬದ್ಧವಾದ march-past ಹೆಜ್ಜೆಗಳ ಧ್ವನಿ ನಿಧಾನವಾಗಿ ಹೆಚ್ಚುತ್ತದೆ. ತಲೆತಗ್ಗಿಸಿ ಕೊಂಡಿದ್ದ ಯುವಕ ತಕ್ಷಣ ಎದ್ದು ಶವದ ಪೆಟ್ಟಿಗೆಯ ಮೇಲೆ ಹೊದಿಸಿದ್ದ ಧ್ವಜವನ್ನು ಕಿತ್ತು ಎಸೆಯುತ್ತಾನೆ. ಶವದ ಪೆಟ್ಟಿಗೆಯ ಕಂಠವನ್ನು ಹಿಡಿದುಕೊಳ್ಳುತ್ತಾನೆ. ಒಳಗೆ ಮಲಗಿದ್ದ ಸುಮಾರು ಮೂವತ್ತು ವರ್ಷದ ವ್ಯಕ್ತಿ ಚಂಗನೆ ಹಾರಿ ಕೆಳಗೆ ಧುಮುಕುತ್ತಾನೆ. ನೇತುಹಾಕಿದ್ದ ಕ್ಯಾಲೆಂಡರ್, ಕಾಗದದ ಹೂಗಳು, ಸಹಿ ಮಾಡುತ್ತಿದ್ದ ಪುಸ್ತಕ, ಎರಡು 'ರೀತ್'ಗಳು, ಉರಿಯುತ್ತಿದ್ದ ಮೇಣದ ಬತ್ತಿ (ಆರಿಸಿ) ಮತ್ತು ಧ್ವಜವನ್ನು Retreat ರೀತಿಯಲ್ಲಿ ಮಡಿಚಿ ಶವಪೆಟ್ಟಿಗೆಯಲ್ಲಿ ಮಲಗಿಸುತ್ತಾರೆ. ಯುವಕ ವ್ಯಾಪಾರಿ ಕೊಟ್ಟಿದ್ದ ನೋಟುಗಳನ್ನು ಹೊರತೆಗೆದು ಶವದ ಪೆಟ್ಟಿಗೆಯಲ್ಲಿ ಹಾಕುತ್ತಾನೆ. ಇಬ್ಬರೂ ಶವದ ಪೆಟ್ಟಿಗೆಯ ಮುಚ್ಚಳವನ್ನು ಮುಚ್ಚುತ್ತಾರೆ. ಏನನ್ನೊ ಜ್ಞಾಪಿಸಿ ಕೊಂಡು, ಚಿಕ್ಕಹುಡುಗ ಶವದ ಪೆಟ್ಟಿಗೆಯಲ್ಲಿ ಹಾಕಿದ್ದ ಚೆಂಡನ್ನು ಹೊರತೆಗೆದು ಮೇಜಿನ ಮೇಲಿಡುತ್ತಾರೆ. ಅನಂತರ ಮುಚ್ಚಳವನ್ನು ಮುಚ್ಚಿ ಪಕ್ಕದಲ್ಲಿಯೇ ಇಟ್ಟಿದ್ದ ಸುತ್ತಿಗೆಯಿಂದ ಸಾಂಕೇತಿಕವಾಗಿ ಎರಡು ಏಟು ಹಾಕು ತ್ತಾರೆ. ಜೇಬಿನಿಂದ ಟೋಪಿಯನ್ನು ತೆಗೆದು ಹಾಕಿ ಕೊಳ್ಳುತ್ತಾರೆ. ಇಬ್ಬರೂ ಪರಸ್ಪರ ನೋಡಿ, ಒಮ್ಮೆ ನಕ್ಕು ಶವದ ಪೆಟ್ಟಿಗೆಯನ್ನು ಹಿಂದೊಬ್ಬ ಮುಂದೊಬ್ಬ ಹಿಡಿದುಕೊಂಡು ಲಯಬದ್ಧನಡಿಗೆಯಲ್ಲಿ, ಎಲ್ಲರೂ ಬಂದುಹೋದ ವಿರುದ್ಧ ದಿಕ್ಕಿನಲ್ಲಿ ಹೋಗುತ್ತಾರೆ. ಇದೆಲ್ಲವೂ ತ್ವರಿತಗತಿಯಲ್ಲಿ ನಡೆಯಬೇಕು. ರಂಗಮಂಚದ ಮೇಲೆ ಬೆಳಕು ಕ್ಷೀಣಿಸುತ್ತಾ ಕತ್ತಲಾಗುತ್ತದೆ. ಆದರೆ ಮೇಜಿನ ಮೇಲಿದ್ದ ಚೆಂಡಿನ ಮೇಲೆ ಒಂದು Spotನ ಬೆಳಕು ಕೇಂದ್ರಿಕರಿಸುತ್ತದೆ. ಹೆಜ್ಜೆಯ ಧ್ವನಿ ಕ್ಷೀಣಿಸುತ್ತದೆ. Spotನ ಬೆಳಕೂ ಕ್ಷೀಣಿಸುತ್ತದೆ.

-ತೆರೆ-

## ಪಾತ್ರಗಳು

ವ್ಯಕ್ತಿ
ಸ್ವಾಮೀಜಿ
ಮಹಿಳೆ
ಮಧ್ಯಮ ವಯಸ್ಸಿನ ಮುದ್ರಕ
ತರುಣ ಮುದ್ರಕ
ಡಾಕ್ಟರ್
ಬಂದೂಕದಾರಿಗಳು: ಯುವಕರು

# ಮನೆಯೊಳಗಣ ಕಿಚ್ಚು

ನೆಲಮಾಳಿಗೆಯ ಕೋಣೆಯಲ್ಲಿ ಮಂದಬೆಳಕು. ಮುದ್ರಣಕ್ಕೆ ಸಂಬಂಧಿಸಿದ ವಸ್ತುಗಳು ಅಲ್ಲಲ್ಲಿ ಹರಡಿಕೊಂಡಿವೆ. 'ಮಾತನಾಡಬಾರದು' ಎಂಬ ಫಲಕವನ್ನು ಎದ್ದುಕಾಣುವಂತೆ ತೂಗುಹಾಕಿದೆ. ಮಧ್ಯಮ ವಯಸ್ಸಿನ ವ್ಯಕ್ತಿಯೊಬ್ಬ ಚಡಪಡಿಸುತ್ತ ಆಗಾಗ ಅಚ್ಚುಗಳನ್ನು ನೋಡುತ್ತ ತಿರುಗಾಡುತ್ತಿರುತ್ತಾನೆ. ಒಮ್ಮೆ ಗಡಿಯಾರವನ್ನು ನೋಡಿಕೊಂಡು ಮೇಲಕ್ಕೆ ಹೋಗಲು ಸಿದ್ಧನಾಗುತ್ತಾನೆ.

ಅಷ್ಟರಲ್ಲಿ, ಮೇಲಿನಿಂದ ಯಾರೋ ಬರುವ ಸೂಚನೆಯಾಗುತ್ತದೆ. ವ್ಯಕ್ತಿ ಭಯ-ಭಕ್ತಿಯಿಂದ ನಿಲ್ಲುತ್ತಾನೆ. ಮಧ್ಯಮ ವಯಸ್ಸಿನ ಕಾಷಾಯಧಾರಿ ಸ್ವಾಮಿಜಿ ಮತ್ತು ಸುಂದರ ಮಹಿಳೆ ಬರುತ್ತಾರೆ. ನಿಂತಿದ್ದ ವ್ಯಕ್ತಿ ಸ್ವಾಮಿಜಿಗೆ ನಮಸ್ಕರಿಸಿ, ಅಲ್ಲಿದ್ದ ಅಚ್ಚುಗಳಲ್ಲಿ ಒಂದನ್ನು ಸ್ವಾಮಿಜಿಗೆ ತೋರಿಸುತ್ತಾನೆ. ಸ್ವಾಮಿಜಿ ಅದನ್ನು ಮಹಿಳೆಗೆ ತೋರಿಸಿ, ಹಿಂತಿರುಗಿಸಿ ತೃಪ್ತಿ ವ್ಯಕ್ತಪಡಿಸುತ್ತಾರೆ. ವ್ಯಕ್ತಿಗೆ ಸಂತೋಷವಾಗುತ್ತದೆ. ಮಹಿಳೆ "ಸ್ವಾಮಿ......" ಎಂದು ಏನೋ ಹೇಳುವಷ್ಟರಲ್ಲಿ ಸ್ವಾಮಿಜಿ ಮಹಿಳೆಯ ಬಾಯನ್ನು ಮುಚ್ಚಿ ತೂಗುಹಾಕಿದ ಫಲಕವನ್ನು ತೋರಿಸುತ್ತಾರೆ. ಸ್ವಾಮಿಜಿ

## ಟಿಪ್ಪಣಿ

ಮತ್ತು ಮಹಿಳೆ ಬಂದ ದಾರಿಯಲ್ಲಿ ಹಿಂತಿರುಗುತ್ತಾರೆ. ಅನಂತರ ವ್ಯಕ್ತಿಕೂಡ ಅವರನ್ನು ಹಿಂಬಾಲಿಸುತ್ತಾನೆ.

೨

ಸ್ವಲ್ಪ ಸಮಯದ ನಂತರ ಬಂದೂಕು ಹಿಡಿದ ದಢೂತಿ ವ್ಯಕ್ತಿಯೊಬ್ಬ ಇಳಿದು ಬರುತ್ತಾನೆ. ಅವನ ಹಿಂದೆ, ಕಣ್ಣು ಕೈಗಳನ್ನು ಕಟ್ಟಿದ, ಬಾಯಿಗೆ ಬಟ್ಟೆ ತುರುಕಿದ ಇಬ್ಬರನ್ನು ಇನ್ನೊಬ್ಬ ಬಂದೂಕಿನವ ನೂಕಿ ಕೊಂಡು ಬರುತ್ತಾನೆ. ಅವರಿಬ್ಬರಲ್ಲಿ ಒಬ್ಬ ಮಧ್ಯ ವಯಸ್ಸಿನವನು. ಇನ್ನೊಬ್ಬ ತರುಣ. ಬಂದೂಕಿನವರ ಒರಟುತನ ಅವರಿಗೆ ನೋವನ್ನುಂಟುಮಾಡುತ್ತಿದೆ. ಒಬ್ಬ ಬಂದೂಕಿನವ ಬಂದ ದಾರಿಗೆ ಅಡ್ಡ ನಿಂತು. ಬಂದೂಕನ್ನು ಇವರಿಬ್ಬರ ಕಡೆ ಗುರಿಮಾಡಿ ನಿಲ್ಲುತ್ತಾನೆ. ಇನ್ನೊಬ್ಬ ತನ್ನ ಬಂದೂಕನ್ನು ಬಂದೂಕು ಹಿಡಿದವನ ಬಳಿ ಇಟ್ಟು ಇವರಿಬ್ಬರ ಕಣ್ಣುಗಳ ಪಟ್ಟಿಯನ್ನು ಮತ್ತು ಕೈಗಳಿಗೆ ಕಟ್ಟಿದ ಹಗ್ಗವನ್ನು ಬಿಚ್ಚುತ್ತಾನೆ. ಆದರೆ ಬಾಯಿಗೆ ತುರುಕಿದ ಬಟ್ಟೆ ಹಾಗೇ ಇರುತ್ತದೆ. ಅದನ್ನು ತೆಗೆಯಲು ತರುಣ ಪ್ರಯತ್ನಿಸಿದಾಗ. ತೆಗೆಯಬಾರದೆಂದು ಬಂದೂಕಿನವ ತನ್ನ 'ಬಟ್' (Butt) ನಿಂದ ತಿವಿದು. ತೂಗು ಹಾಕಿದ ಫಲಕ ತೋರಿಸುತ್ತಾನೆ. ಇವರಿಬ್ಬರನ್ನು ಮುದ್ರಣದ ಕೆಲಸದಲ್ಲಿ ತೊಡಗುವಂತೆ ಮಾಡುತ್ತಾನೆ. ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ. ಹಿನ್ನೆಲೆಯಲ್ಲಿ ಮುದ್ರಣದ ಶಬ್ದ ಕೇಳಿಬಂದು ನಿಧಾನವಾಗಿ ಕ್ಷೀಣಿಸುತ್ತದೆ.

೩

ಸ್ವಲ್ಪ ಸಮಯದ ನಂತರ ರಂಗಮಂಚದ ಮೇಲೆ ನಿಧಾನವಾಗಿ ಬೆಳಕು ಹರಡುತ್ತದೆ. ಮುದ್ರಕರಿಬ್ಬರು

ಅಸ್ತ್ರಗಳನ್ನು ತೋಳೆಯುವ. ಒರೆಸುವ ಕ್ರಿಯೆಯಲ್ಲಿ ತೊಡಗಿರುತ್ತಾರೆ. ಪಕ್ಕದಲ್ಲಿ ನೋಟುಗಳ ರಾಶಿ ಬಿದ್ದಿರುತ್ತದೆ. ಇವರ ಕೆಲಸ ಮುಗಿದ ಕೂಡಲೇ ಒಬ್ಬ ಬಂದೂಕುದಾರಿ ಬಂದು ಇವರಿಬ್ಬರ ಕಣ್ಣುಗಳಿಗೆ ಪಟ್ಟಿ ಗಳನ್ನು ಕಟ್ಟುತ್ತಾನೆ. ಕೈಗಳನ್ನು ಬಿಗಿಯುತ್ತಾನೆ. ಅಷ್ಟ ರಲ್ಲಿ ಮೇಲಿನಿಂದ ಇಳಿದು ಬರುವ ಸದ್ದಾಗುತ್ತದೆ. ಬಂದೂಕುಧಾರಿ ಇವರಿಬ್ಬರನ್ನೂ ಬಂದೂಕಿನಿಂದ ಪಕ್ಕಕ್ಕೆ ಸರಿಸಿ ದಾರಿಮಾಡಿಕೊಡುತ್ತಾನೆ. ಸ್ವಾಮೀಜಿ, ಮಹಿಳೆ ಮತ್ತು ವ್ಯಕ್ತಿ ಬಂದು ಬಂಧಿಸಿದ್ದವರನ್ನು ಒಮ್ಮೆ ನೋಡುತ್ತಾರೆ. ಅನಂತರ ನೋಟುಗಳ ರಾಶಿಯ ಬಳಿಗೆ ಹೋಗಿ. ಸಂತೋಷದಿಂದ ಒಂದನ್ನು ಕೈಗೆ ತೆಗೆದು ಕೊಂಡು ನೋಡುತ್ತಾರೆ. ಸ್ವಾಮೀಜಿ ಸನ್ನೆ ಮಾಡಿದ ಕೂಡಲೇ. ಮಹಿಳೆ ತಾನು ಪರ್ಸ್‌ನಲ್ಲಿ ತಂದಿದ್ದ ಒಂದು ನೋಟನ್ನು ತೆಗೆದುಕೊಡುತ್ತಾಳೆ. ಸ್ವಾಮೀಜಿ ಎರಡನ್ನೂ ಹೋಲಿಸಿ. ತೃಪ್ತಿಯಾಗಿ ನಿಜವಾದ ನೋಟನ್ನು ಮಹಿಳೆಗೆ ಕೊಟ್ಟು. ರಾಶಿಯ ನೋಟನ್ನು ರಾಶಿಗೇ ಹಾಕುತ್ತಾರೆ. ಈ ಮಧ್ಯೆ ಹಿಂದೆ ಸರಿಸಿದ್ದ ಇಬ್ಬರು ವ್ಯಕ್ತಿಗಳಲ್ಲಿ, ತರುಣ ಪ್ರಯಾಸದಿಂದ ಮುಂದಿನವನ ಭುಜದ ಆಸರೆಯಿಂದ ಕಣ್ಣುಪಟ್ಟಿಯನ್ನು ಕಷ್ಟಪಟ್ಟು ಪಕ್ಕಕ್ಕೆ ಸರಿಸಿ, ಅಲ್ಲಿದ್ದವ ರನ್ನು ಕಂಡು "ಹಾ..." ಎಂದು ಉದ್ಗಾರ ತೆಗೆಯು ತ್ತಾನೆ. ಮಹಿಳೆ ಜೊತೆಯಲ್ಲಿ ತಂದಿದ್ದ ಪರ್ಸ್ ಮತ್ತು ಬೀಗದ ಕೈಗಳನ್ನು ಗಾಬರಿಯಿಂದ ಕೆಳಗೆ ಹಾಕುತ್ತಾಳೆ.

ಎಲ್ಲರ ದೃಷ್ಟಿ ತರುಣನ ಕಡೆ ಸರಿಯುತ್ತದೆ. ತರುಣ ಅಸಹಾಯಕನಾಗಿ ತಲೆತಗ್ಗಿಸುತ್ತಾನೆ. ಸ್ವಾಮೀಜಿಯವರ ಮುಖದಲ್ಲಿ ಕೋಪ, ಭಯ ಆವರಿಸುತ್ತದೆ. ಅವರು ಮುಂದೆ ಬಂದು ಕಣ್ಣು ಬಿಚ್ಚಿಕೊಂಡ ತರುಣನ ಕಪಾಳಕ್ಕೆ ಹೊಡೆಯುತ್ತಾರೆ. ಅವನನ್ನು ಇಲ್ಲಿಯೇ ಕೂಡಿ

## ಟಿಪ್ಪಣಿ

ಟಿಪ್ಪಣಿ

ಹಾಕುವಂತೆ, ಇನ್ನೊಬ್ಬನನ್ನು ಮೇಲಕ್ಕೆ ಕರೆದುಕೊಂಡು ಹೋಗುವಂತೆ ಸನ್ನೆಮಾಡಿ, ಸಿಡಿಮಿಡಿಯಾಗಿ, ಮರದ ಹಾವುಗೆಗಳನ್ನು ಗಾಬರಿಯಿಂದ ಮೆಟ್ಟಿಕೊಂಡು ತೆರಳುತ್ತಾರೆ. ಮಹಿಳೆ ಹಿಂಬಾಲಿಸುತ್ತಾಳೆ. ವ್ಯಕ್ತಿ ಬಂದೂಕುಧಾರಿಗಳನ್ನು ಕೆಂಗಣ್ಣಿನಿಂದ ನೋಡಿ, ಮತ್ತೆ ಕಣ್ಣು ಕಟ್ಟುವಂತೆ ಸನ್ನೆಮಾಡಿ ಹೊರಡುತ್ತಾನೆ. ಒಬ್ಬ ಬಂದೂಕಿನವ ಮಧ್ಯಮ ವಯಸ್ಸಿನವನನ್ನು ಮೇಲಕ್ಕೆ ದಬ್ಬಿಕೊಂಡು ಹೋಗುತ್ತಾನೆ. ಇನ್ನೊಬ್ಬ ಬಂದೂಕಿನವ ತರುಣನನ್ನು ಮೂಲೆಗೆ ತಳ್ಳಿ, ಕಣ್ಣುಪಟ್ಟಿಯನ್ನು ಸರಿಪಡಿಸಿ ಕಾವಲು ನಿಲ್ಲುತ್ತಾನೆ. ರಂಗಮಂಚದ ಮೇಲೆ ಬೆಳಕು ಕ್ಷೀಣಿಸುತ್ತದೆ.

೪

ಮತ್ತೆ, ರಂಗಮಂಚದ ಮೇಲೆ ಬೆಳಕು ಮೂಡುವ ಹೊತ್ತಿಗೆ, ತರುಣ, ಮುದ್ರಣಾಲಯದ ಹಳೆಯ ಗೋಣಿಪಟ್ಟಿಯನ್ನು ಪೂರ್ಣವಾಗಿ ಹೊದ್ದುಕೊಂಡು ಒಂದು ಮೂಲೆಯಲ್ಲಿ ಬಿದ್ದುಕೊಂಡಿರುತ್ತಾನೆ. ತರುಣ ಮೆಲ್ಲಗ ಎದ್ದು, ವಾತಾವರಣವನ್ನು ಪರೀಕ್ಷಿಸಿ, ತನ್ನ ಕಾಲಿನ ಸಹಾಯದಿಂದ ಬಾಯಬಟ್ಟೆಯನ್ನು ತೆಗೆಯುತ್ತಾನೆ. ಕಣ್ಣುಪಟ್ಟಿಯನ್ನು ಮೊಣಕಾಲಿನ ಸಹಾಯದಿಂದ, ಕಷ್ಟಪಟ್ಟು ಪಕ್ಕಕ್ಕೆ ಸರಿಸುತ್ತಾನೆ. ಬಂದೂಕುಧಾರಿ ಎಚ್ಚರವಿರುವನೋ, ಇಲ್ಲವೊ ಎಂದು ಸಣ್ಣ ಶಬ್ದದಿಂದ ಪರೀಕ್ಷಿಸುತ್ತಾನೆ. ಬಂದೂಕುಧಾರಿಗೆ ಎಚ್ಚರವಾಗುವುದಿಲ್ಲ. ಮುದ್ರಣಯಂತ್ರದ ಸಹಾಯದಿಂದ ಕೈಕಟ್ಟನ್ನು ಬಿಚ್ಚಿಕೊಳ್ಳುತ್ತಾನೆ. ಮೆಲ್ಲಗೆ, ನೋಟಿನ ರಾಶಿಯನ್ನು ಮನುಷ್ಯಾಕೃತಿಯನ್ನಾಗಿ ಹರಡಿ, ಅದರ ಮೇಲೆ ತಾನು ಹೊದ್ದಿದ್ದ ಗೋಣಿಪಟ್ಟಿಯನ್ನು ಹೊದಿಸು

ತ್ತಾನೆ. ಹೊರಗೆ ಹೋಗಲು ಅನುಕೂಲವಾಗುವ ಮುದ್ರಣಾಲಯದ ಸ್ಕ್ರೂಡ್ರೈವರ್ ಮತ್ತು ಸುತ್ತಿಗೆಯನ್ನು ಎತ್ತಿಕೊಂಡು, ವ್ಯಂಗ್ಯವಾಗಿ ಬಂದೂಕುಧಾರಿಗೆ ಒಂದು ನಮಸ್ಕಾರ ಹಾಕಿ, ನಿಧಾನವಾಗಿ ಮೆಟ್ಟಲು ಹತ್ತಿಹೋಗುತ್ತಾನೆ. ಮತ್ತೆ ಹಿಂದಕ್ಕೆ ಬಂದು, ಗೋಡೆ ಒರಗಿಸಿದ್ದ ಬಂದೂಕುಧಾರಿಯು ಬಂದೂಕಿನಿಂದ ತೋಟಾಗಳನ್ನು ತೆಗೆದು ಕಸದ ಬುಟ್ಟಿಗೆ ಎಸೆದು ಹೊರಡುತ್ತಾನೆ. ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ.

೨೩

ಬೆಳಕು ನಿಧಾನವಾಗಿ ರಂಗಮಂಚದ ಮೇಲೆ ಹರಡುತ್ತದೆ. ಹನ್ನೆರಡು ಗಂಟೆ ಹೊಡೆಯುವ ಸದ್ದು ಕೇಳಿ ಬರುತ್ತದೆ. ಸಿಪಾಯಿ ನಿಧಾನವಾಗಿ ಎಚ್ಚರಗೊಂಡು, ಗಾಬರಿಯಿಂದ ಟೋಪಿಯನ್ನು ಹಿಂದು-ಮುಂದು ಹಾಕಿಕೊಂಡು, ಮಲಗಿದ್ದ ತರುಣನ ಕಡೆಗೆ ಒಮ್ಮೆ ನೋಡಿ ಬಂದೂಕನ್ನು ಎತ್ತಿಕೊಂಡು ಕಾವಲು ನಿಲ್ಲುತ್ತಾನೆ. ಮೆಟ್ಟಲು ಇಳಿಯುವ ಸದ್ದಾಗುತ್ತದೆ. ಸ್ವಾಮೀಜಿಯ ಜೊತೆಯಲ್ಲಿ ಹಿಂತಿರುಗಿದ್ದ ವ್ಯಕ್ತಿ ಮತ್ತು ಒಬ್ಬ ಡಾಕ್ಟರ್ ಇಂಜೆಕ್ಷನ್ ಹಿಡಿದು ಬರುತ್ತಾರೆ. ಬಂದೂಕುಧಾರಿ ವಂದಿಸುತ್ತಾನೆ. ಬಂದ ವ್ಯಕ್ತಿ ಮಲಗಿರುವ ತರುಣನನ್ನು ಎಬ್ಬಿಸುವಂತೆ ಸೂಚಿಸುತ್ತಾನೆ. ಬಂದೂಕುಧಾರಿ ಬಂದೂಕನ್ನು ಗೋಡೆಗೆ ಒರಗಿಸಿ ಹಳೆಯ ಗೋಣಿಪಟ್ಟಿಯನ್ನು ಎತ್ತಲು, ಅಲ್ಲಿ ನೋಟಿನ ರಾಶಿ ಮಾತ್ರ ಕಂಡುಬರುತ್ತದೆ. ಬಂದೂಕುಧಾರಿ ಗಾಬರಿಯಿಂದ, ಭಯಭೀತನಾಗಿ ನಿಲ್ಲುತ್ತಾನೆ. ಬಂದ ವ್ಯಕ್ತಿಗೆ ಆಶ್ಚರ್ಯ, ಕೋಪ ಬರುತ್ತದೆ. ವ್ಯಕ್ತಿ ಬಂದೂಕುಧಾರಿಗೇ ಇಂಜೆಕ್ಷನ್ ಕೊಡುವಂತೆ ಡಾಕ್ಟರ್‌ಗೆ ಸನ್ನೆ ಮಾಡುತ್ತಾನೆ. ಅಷ್ಟರಲ್ಲಿ ಮೆಟ್ಟಲು ಇಳಿಯುವ ಸದ್ದಾಗುತ್ತದೆ. ಸ್ವಾಮೀಜಿ ಮತ್ತು ಮಹಿಳೆ ಗಾಬರಿಯಿಂದ, ಭಯಗೊಂಡು ಬರುತ್ತಾರೆ. ಡಾಕ್ಟರ್ ಬಂದೂಕುಧಾರಿಗೆ ಬಲವಂತವಾಗಿ ಇಂಜೆಕ್ಷನ್ ಚುಚ್ಚುತ್ತಾನೆ. ಅವನು

ಟಿಪ್ಪಣಿ

ಟಿಪ್ಪಣಿ

ವಿಕಾರವಾಗಿ ಕೂಗಿ, ಸಂಕಟದಿಂದ ಒದ್ದಾಡಿ ತಣ್ಣಗಾಗುತ್ತಾನೆ. ಹೊರಗಡೆಯಲ್ಲಿ ಗಲಾಟೆಯ ಸದ್ದು ಕೇಳಿಸುತ್ತದೆ. ಎಲ್ಲರೂ ಮೆಟ್ಟಿಲು ಕಡೆ ನೋಡುತ್ತಾರೆ. ಮಹಿಳೆ ಭಯದಿಂದ ಸ್ವಾಮೀಜಿಯ ತೋಳನ್ನು ಆಶ್ರಯಿಸುತ್ತಾಳೆ. ಸ್ವಾಮೀಜಿ ಮಹಿಳೆಯನ್ನು ಹತ್ತಿರದಲ್ಲಿದ್ದ ಸ್ಟೂಲಿನ ಮೇಲೆ ಕೂಡಿಸುತ್ತಾರೆ. ಸತ್ತ ಬಂದೂಕುಧಾರಿಯ ಬಂದೂಕನ್ನು ಎತ್ತಿಕೊಂಡು, ಮೆಟ್ಟಿಲಿನ ಕಡೆ ಗುರಿಮಾಡಿ ನಿಲ್ಲುತ್ತಾರೆ. ವ್ಯಕ್ತಿಗೆ ದೀಪ ಆರಿಸುವಂತೆ ಸೂಚಿಸುತ್ತಾರೆ. ಡಾಕ್ಟರ್ ಅಸಹಾಯಕನಾಗಿ ನಿಲ್ಲುತ್ತಾನೆ. ವ್ಯಕ್ತಿ ದೀಪವನ್ನು ಆರಿಸುತ್ತಾನೆ.

೬

ಸ್ವಲ್ಪ ಸಮಯದಲ್ಲಿ ಗದ್ದಲ ಹೆಚ್ಚಾಗುತ್ತದೆ. ಪಂಜುಗಳ ಸಮೇತ ಯುವಕರ ತಂಡ ನೆಲಮಾಳಿಗೆಗೆ ನುಗ್ಗುತ್ತದೆ. ತಪ್ಪಿಸಿಕೊಂಡುಹೋದ ತರುಣ ಮುಂಚೂಣಿಯಲ್ಲಿರುತ್ತಾನೆ. ಸ್ವಾಮೀಜಿ ಬಂದೂಕನ್ನು ಗುರಿಮಾಡಿರುವುದನ್ನು ಕಂಡು, ಬಂದ ಯುವಕರು ಹಿಂದೆ ಸರಿಯುತ್ತಾರೆ. ಮುಂಚೂಣಿಯ ತರುಣ ಒಮ್ಮೆ ಸತ್ತುಬಿದ್ದಿರುವ ಬಂದೂಕುಧಾರಿಯನ್ನೂ, ಸ್ವಾಮೀಜಿಯ ಬಂದೂಕನ್ನೂ ನೋಡಿ, ನಿಧಾನವಾಗಿ ಮುಂದೆ ಬಂದು ಕಸದಬುಟ್ಟಿಗೆ ಕೈಹಾಕಿ ತೋಟಾಗಳನ್ನು ತೆಗೆಯುತ್ತಾನೆ. ಸ್ವಾಮೀಜಿಗೆ ಅವನ್ನು ತೋರಿಸಿ, ನಕ್ಕು ಮತ್ತೆ ಅವನ್ನು ಅಲ್ಲಿಗೇ ಎಸೆಯುತ್ತಾನೆ. ಮಹಿಳೆ ನಿಂತು ಅಳುವುದನ್ನು ಗಮನಿಸಿ, ಅಲ್ಲಿಗೆ ಹೋಗಿ ಮಹಿಳೆಯನ್ನು ಆ ಸ್ಟೂಲಿನ ಮೇಲೆ ಕುಳ್ಳಿರಿಸಿ ‘ಶೂ...’ ಎಂದು ‘ಮಾತನಾಡಬೇಡಿ’ ಫಲಕವನ್ನು ತೋರಿಸುತ್ತಾನೆ. ಸ್ವಾಮೀಜಿ ಅಸಹಾಯಕನಾಗಿ ಭಯದಿಂದ ತಲೆತಗ್ಗಿಸುತ್ತಾನೆ. ಮುಂಚೂಣಿಯಲ್ಲಿರುವ ತರುಣ ಪಂಜಿನ ಸಹಾಯದಿಂದ ಎಲ್ಲರ ಮುಖಗಳನ್ನೂ ಒಮ್ಮೆ ನೋಡುತ್ತಾನೆ. ಪಂಜನ್ನು ಹಿಂತಿರುಗಿಸಿ, ಸ್ವಾಮೀಜಿಯ ಬಂದೂಕನ್ನು

ಕಿತ್ತುಕೊಂಡು ತನ್ನ ಕಡೆಯವರಿಗೆ ಕೊಡುತ್ತಾನೆ. ಬಂದೂಕನ್ನು ತೆಗೆದುಕೊಂಡ ವ್ಯಕ್ತಿ ಕಸದಬುಟ್ಟಿಯ ತೋಟಾಗಳನ್ನು ತೆಗೆದುಕೊಳ್ಳುತ್ತಾನೆ. ಒಬ್ಬ ಯುವಕ ಹಗ್ಗದ ಸಮೇತ ಮುಂದೆ ಬಂದು ಎಲ್ಲರ ಕೈಗಳನ್ನು ಹಿಂದೆ ಕಟ್ಟುತ್ತಾನೆ. ಕೆಲವರು ಪಂಜುಗಳನ್ನು ಹಿಡಿದು ಮುಂದೆ ನಡೆಯುತ್ತಾರೆ. ಮಧ್ಯೆ ಸ್ವಾಮೀಜಿ, ಮಹಿಳೆ, ಡಾಕ್ಟರ್ ಮತ್ತು ವ್ಯಕ್ತಿ ತಲೆತಗ್ಗಿಸಿ ನಡೆಯುತ್ತಾರೆ. ಅವರ ಹಿಂದೆ ಉಳಿದ ಪಂಜಿನವರು ನಡೆಯುತ್ತಾರೆ. ಅವರಲ್ಲಿ ಕೆಲವರು ಕುಡಗೋಲು, ದೊಣ್ಣೆಗಳನ್ನು ಹಿಡಿದಿರುತ್ತಾರೆ. ಮುಂಜೊಣೆಯ ತರುಣ ಕೊನೆಯಲ್ಲಿ ಒಮ್ಮೆ ಮುದ್ರಣಾಲಯವನ್ನು ಮತ್ತು ಸತ್ತುಬಿದ್ದಿದ್ದ ಬಂದೂಕಿನವನನ್ನು ನೋಡಿ, ಮುದ್ರಣಾಲಯದ ದೀಪವನ್ನು ಹಾಕುತ್ತಾನೆ. ಮೆಟ್ಟಿಲು ಬಳಿಗೆ ಬರುತ್ತಾನೆ. ಏನೋ ನೆನಪು ಮಾಡಿಕೊಂಡವನಂತೆ ನಿಂತು, ತೂಗುಹಾಕಿದ್ದ "ಮಾತನಾಡಬೇಡಿ" ಫಲಕವನ್ನು ಕೀಳುತ್ತಾನೆ. ಅದನ್ನು ಮುರಿದುಹಾಕಿ, ತುಳಿದು ಮೆಟ್ಟಿಲು ಹತ್ತಿ ಹೋಗುತ್ತಾನೆ. ಗದ್ದಲ ಹೆಚ್ಚುತ್ತದೆ. ನಿಧಾನವಾಗಿ ಕ್ಷೀಣಿಸುತ್ತದೆ. ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ.

೭

ನೆರಳು—ನಾಟಕದ (Shadow play) ರಂಗ ಸಿದ್ಧತೆ. ನೆರಳಿನಲ್ಲಿ ಸ್ವಾಮೀಜಿ, ಮಹಿಳೆ, ಡಾಕ್ಟರ್ ಮತ್ತು ವ್ಯಕ್ತಿ ಒಬ್ಬೊಬ್ಬರಾಗಿ ಬರುತ್ತಾರೆ. ಅವರು ತಲೆ ಕೈಗಳನ್ನು ಇಟ್ಟುಕೊಂಡು ನಿಲ್ಲುತ್ತಾರೆ. ಅವರ ಹಿಂದೆ ಎದುರಿನಲ್ಲಿ ತರುಣ, ಬಂದೂಕನ್ನು ಅವರ ಕಡೆ ಗುರಿಮಾಡಿ ನಿಲ್ಲುತ್ತಾನೆ. ಒಂದೊಂದು ಗುಂಡಿನ ಶಬ್ದದೊಂದಿಗೆ ಒಬ್ಬೊಬ್ಬರು ಕುಸಿದು ಬೀಳುತ್ತಾರೆ. ನೆರಳು ನಾಟಕದ ಬಿಳಿ ಪರದೆಯ ಮೇಲೆ ಅರುಣಛಾಯೆ ಮೂಡುತ್ತದೆ.

-ತೆರೆ-

ಟಿಪ್ಪಣಿ





## ಪಾತ್ರಗಳು

ಯುವಕ

ಟೀ ಹುಡುಗ

ಪಾಲೀಷ್ ಹುಡುಗ

ತರುಣಿ

ಸಮವಸ್ತ್ರ ಯುವಕರ ತಂಡ

# ಏಳು, ಮನುವಿನ ಮಗನೆ!

ಅಸ್ತವ್ಯಸ್ತವಾಗಿ ವಸ್ತುಗಳು ಹರಡಿಕೊಂಡಿರುವ ಕೊಠಡಿ. ಬೆಳಗಿನ ಸಮಯ. ಕೊಠಡಿಗೆ attached bath room ಕೂಡಾ ಉಂಟು. ಅಲ್ಲಲ್ಲಿ ಬೀರ್, ಬ್ರಾಂದಿ, ವಿಸ್ಕಿ ಬಾಟಲ್‌ಗಳು ಕಾಣಿಸುತ್ತವೆ. ಮಂಚದ ಮೇಲೆ ಹಾಸಿರುವ ಒಂದು ಹಾಸಿಗೆಯ ಮೇಲೆ ಇಸ್ಪೀಟ್ ಎಲೆಗಳು ಸಿಗರೇಟ್ ತುಂಡುಗಳು ಬಿದ್ದಿವೆ. ಕೊಳೆಯಾದ ಹಾಕಿ ಕೊಳ್ಳುವ ಬಟ್ಟೆಗಳು ಎಲ್ಲೆಲ್ಲೋ ಬಿದ್ದಿವೆ. ಇರುವ ಒಂದು ಕಿಟಿಕಿ ಕೂಡ ಮುಚ್ಚಿದೆ. ಇಂತಹ ವಾತಾವರಣದ ಮೇಲೆ ನಿಧಾನವಾಗಿ ಬೆಳಕು ಮೂಡುತ್ತದೆ.

೧

ಸ್ವಲ್ಪ ಸಮಯದ ನಂತರ ಒಬ್ಬ ಯುವಕ ರೂಮಿನ ಬಾಗಿಲನ್ನು ತಳ್ಳಿಕೊಂಡು ಬರುತ್ತಾನೆ. ಹಾಕಿಕೊಂಡಿರುವ ಬಟ್ಟೆ ಅಸ್ತವ್ಯಸ್ತವಾಗಿದೆ. ಕೆದರಿದ ತಲೆ, ನಿದ್ದೆಗೆಟ್ಟ ಕಣ್ಣು ಗಳು, ಹಾಗೇ ತೂರಾಡಿಕೊಂಡು ಬಂದು ಆ ಗಲೀಜು ಹಾಸಿಗೆಯ ಮೇಲೆ ಬಿದ್ದುಕೊಳ್ಳುತ್ತಾನೆ. ಪ್ಯಾಂಟು ಜೇಬನ್ನು ಹುಡುಕಾಡಿ ಇದ್ದ ಒಂದು ಸಿಗರೇಟನ್ನು ಬಾಯಿಗಿಟ್ಟುಕೊಳ್ಳುತ್ತಾನೆ. ಬೆಂಕಿಪಟ್ಟಣಕ್ಕಾಗಿ ಹುಡುಕಾಡಿ

**ಟಿಪ್ಪಣಿ**

ಮಂಚದ ಕೆಳಗೆ ಬಿದ್ದಿದ್ದನ್ನು ಎತ್ತಿಕೊಂಡು ಸಿಗರೇಟನ್ನು ಹಚ್ಚಿಕೊಂಡು ಮತ್ತೆ, ಅಲ್ಲಿಯೇ ಬಿಸಾಡುತ್ತಾನೆ. ಸಿಗರೇಟನ್ನು ಒಂದೆರಡು ದಂ ಎಳೆದು, ಮಂಚದ ಕೊನೆಗೆ ತಿಕ್ಕುವುದರಿಂದ ಆರಿಸಿ ಅಲ್ಲೇ ಬಿಸಾಕುತ್ತಾನೆ. ಹಾಕಿ ಕೊಂಡಿರುವ ಷೂಗಳನ್ನು ಬಿಚ್ಚಿರುವುದಿಲ್ಲ. ಹಾಗೇ ಕಾಲಬಳಿ ಹರಡಿಕೊಂಡಿರುವ ರಗ್ಗನ್ನು ಮುಖದ ತುಂಬಾ ಎಳೆದುಕೊಳ್ಳುತ್ತಾನೆ. ಒಂದೆರಡು ಸೆಕೆಂಡುಗಳ ಅನಂತರ ಮತ್ತೆ ಹೊದಿಕೆಯನ್ನು ಕಿತ್ತೆಸೆದು ಹಾಸಿಗೆಯ ಮೇಲೆ ಕುಳಿತುಕೊಳ್ಳುತ್ತಾನೆ. ಜೇಬಿನಿಂದ ಇಸ್ಪೀಟು ಎಲೆಗಳನ್ನು ತೆಗೆಯುತ್ತಾನೆ. ಕಾಲುಗಳ ಹತ್ತಿರದ ಹಾಸಿಗೆಯ ಕೆಳಗಿನಿಂದ ಮತ್ತೊಂದು ಇಸ್ಪೀಟ್ ಪ್ಯಾಕ್ ಹೊರತೆಗೆ ಯುತ್ತಾನೆ. ಎರಡನ್ನೂ ಕಲಸಿ ತಾನೇ ಆಡುತ್ತಾನೆ. ಎಲೆ ಸರಿಯಾಗಿ ಬೀಳದಿದ್ದಕ್ಕೆ ಅದಕ್ಕೆ ಉಗಿಯುತ್ತಾನೆ. ಮತ್ತೆ ಕಲಸಿ ಆಡುತ್ತಾನೆ. ಸರಿಯಾಗಿ ಬಿದ್ದಿದ್ದಕ್ಕೆ ಕಣ್ಣಿಗೆ ಒತ್ತಿಕೊಳ್ಳುತ್ತಾನೆ.

ಆದನ್ನು ಅಲ್ಲಿ ಬಿಸಾಡಿ, Bath-room ಬಾಗಿಲು ತೆರೆದು ಉಚ್ಚೆ ಹುಯ್ಯುತ್ತಾನೆ. ಬಾಗಿಲು ತೆರೆದೇ ಇರುತ್ತದೆ. ಅನಂತರ ಬಾಗಿಲು ಮುಚ್ಚದೆ ಹಾಗೇ ಬಂದು ಹಾಸಿಗೆಯ ಮೇಲೆ ಬಿದ್ದುಕೊಳ್ಳುತ್ತಾನೆ. ಅಷ್ಟರಲ್ಲಿ ಮುಚ್ಚಿದ್ದ ಕಿಟಕಿಯನ್ನು ನೂಕಿಕೊಂಡು ಬಂದ ವಾರ್ತಾ ಪತ್ರಿಕೆ ಒಳಗೆ ಬೀಳುತ್ತದೆ. ಇವನು ಒಮ್ಮೆ ಆ ಪತ್ರಿಕೆ ಯನ್ನು ನೋಡಿ, ಆ ಪತ್ರಿಕೆಯಿಂದಲೇ ಕಿಟಕಿಯನ್ನು ಮುಚ್ಚಿ, ಅದನ್ನು ತುಂಬಿದ್ದ ಕಸದ ಬುಟ್ಟಿಗೆ ಎಸೆಯು ತ್ತಾನೆ. ಇಸ್ಪೀಟ್ ಎಲೆಗಳನ್ನು ಎತ್ತಿಕೊಂಡು ಆಡಲು ಪ್ರಾರಂಭಿಸುತ್ತಾನೆ. ಆರಿಸಿದ್ದ ಸಿಗರೇಟನ್ನೇ ಮತ್ತೆ ಹಚ್ಚಿಕೊಂಡು ಒಂದೆರಡು ದಂ ಎಳೆಯುತ್ತಾನೆ. ಅಷ್ಟು ಹೊತ್ತಿಗೆ ಸಮವಸ್ತ್ರ ಧರಿಸಿದ ಚಿಕ್ಕ ಹುಡುಗ, ರೂಮಿನ

ಬಾಗಿಲನ್ನು ತೆರೆದುಕೊಂಡು ಒಳಗೆ ಬಂದು 'ಟೀ' ಎಂದು ಹೇಳಿ ಟೇಬಲ್ ಮೇಲಿಟ್ಟು. ಬಾಗಿಲು ಮುಚ್ಚಿಕೊಂಡು ಹೊರಟು ಹೋಗುತ್ತಾನೆ. ಯುವಕ ಇಸ್ಪೀಟ್ ಎಲೆಗಳನ್ನು ಮತ್ತೊಮ್ಮೆ ಕಲಸಿ ಉರಿಯುತ್ತಿದ್ದ ಸಿಗರೇಟ್ ಬೂದಿಯನ್ನು ಟೀ ಕಪ್ಪಿಗೆ ಕೊಡವಿ, ಅದನ್ನು ash-tray ಮಾಡಿಕೊಳ್ಳುತ್ತಾನೆ. ಒಮ್ಮೆ ಕೈಕಾಲು ಮುರಿದು ಟೇಬಲ್ ಡ್ರಾದಿಂದ ಬೀರ್ ಬಾಟಲ್ ಹೊರತೆಗೆದು, ಅದರ ಮುಚ್ಚಳ ತೆಗೆದು. ಇದ್ದುದನ್ನು ಗಟಗಟನೆ ಗಂಟಲಿಗೆ ಸುರಿದುಕೊಳ್ಳುತ್ತಾನೆ. ಖಾಲಿಯಾದ ಶೀಸೆಯನ್ನು ಮಂಚದ ಕೆಳಗೆ ಬಿಸಾಡುತ್ತಾನೆ. ಯಾವುದೋ ಬದಿಯಲ್ಲಿ ಬಚ್ಚಿಟ್ಟ Sexy ಪತ್ರಿಕೆಗಳನ್ನು ಹಾಗೇ ಒಮ್ಮೆ ತಿರುವಿಹಾಕಿ ಬಿಸಾಡುತ್ತಾನೆ. ಹತ್ತಿರದಲ್ಲೇ ಇದ್ದ ಟ್ರಾನ್ಸಿಸ್ಟರ್ ಆನ್ ಮಾಡಿ, ಬೇಸರದಿಂದ ಆಫ್ ಮಾಡುತ್ತಾನೆ. ಮತ್ತೆ ಮಲಗಿ ಕತ್ತಿನ ಮಟ್ಟದವರೆಗೆ ರಗ್ಗನ್ನು ಎಳೆದುಕೊಂಡು ಇಸ್ಪೀಟ್ ಎಲೆಗಳನ್ನು ಬೀಸಣಿಗೆಯ ಆಕಾರದಲ್ಲಿ ಜೋಡಿಸಿಕೊಂಡು ತಾನೇ ಖುಷಿಪಡುತ್ತಾನೆ. ಇದ್ದಕ್ಕಿದ್ದಂತೆ ಎಲ್ಲವನ್ನೂ ಟೇಬಲ್ ಮೇಲೆ ಬಿಸಾಡಿ ರಗ್ಗನ್ನು ಪೂರ್ತಿ ಹೊದ್ದುಕೊಂಡು ಮುದುರಿ ಮಲಗುತ್ತಾನೆ. ಒಂದೆರಡು ಕ್ಷಣಗಳು ಉರುಳುತ್ತಲೇ ಗಡಿಯಾರದ ಅಲಾರಂ ಬಡಿದುಕೊಳ್ಳುತ್ತದೆ. ರಗ್ಗನ್ನು ಸರಿಸಿ ಹೊಡೆಯುತ್ತಿದ್ದ ಅಲಾರಂ ಗಡಿಯಾರವನ್ನು, ರಗ್ಗಿನ ಒಳಗೆ ಹುದುಗಿಸಿಟ್ಟುಕೊಂಡು, ಮೊದಲಿನಂತೆ ಮುದುರಿಕೊಂಡು ಮಲಗಿಕೊಳ್ಳುತ್ತಾನೆ. ಗಡಿಯಾರದ ಅಲಾರಂ ಧ್ವನಿ ನಿಧಾನವಾಗಿ ಕಡಿಮೆಯಾಗುತ್ತದೆ. ಬೆಳಕು ಕ್ಷೀಣಿಸುತ್ತದೆ.

೩

ಬೆಳಕು ನಿಧಾನವಾಗಿ ಮೂಡುತ್ತದೆ. ಯುವಕ ಪೂರ್ಣವಾಗಿ ಹೊದ್ದುಕೊಂಡು ಮುದುರಿ ಮಲಗಿರು

ಟಿಪ್ಪಣಿ

ಟಿಪ್ಪಣಿ

ತ್ತಾನೆ. ರೂಮಿನ ಬಾಗಿಲ ಮೇಲೆ 'ಟಿಕ್ ಟಿಕ್' ಶಬ್ದ ವಾಗುತ್ತದೆ. ಎರಡು ಮೂರು ಬಾರಿ ಹೀಗೆ ಶಬ್ದವಾದ ಮೇಲೆ. ಮೆಲ್ಲಗೆ ಬಾಗಿಲು ತೆರೆದುಕೊಳ್ಳುತ್ತದೆ. ಷೂ-ಪಾಲೀಷ್ ಹಾಕುವ ಹುಡುಗ ತನ್ನ ಪಾಲೀಷ್ ಉಪಕರಣಗಳ ಸಮೇತ ಇಣುಕಿಹಾಕಿ ಮಂಚದ ಕಡೆ ನೋಡಿ 'ಸಾಬ್... ಸಾಬ್' ಎನ್ನುತ್ತಾನೆ. ಮಲಗಿದ್ದ ಯುವಕ ರಗ್ಗನ್ನು ಪಕ್ಕಕ್ಕೆ ಸರಿಸಿ ನೋಡುತ್ತಾನೆ. ಆ ಹುಡುಗ ಹಲ್ಲುಕಿರಿಯುತ್ತಾನೆ. ಯುವಕ ಹುಡುಗನಿಗೆ ಕಾಲುಗಳಲ್ಲಿರುವ ಷೂಗಳನ್ನು ಬಿಚ್ಚಿ ಪಾಲೀಷ್ ಮಾಡು ವಂತೆ ಸೂಚಿಸಿ. ಮತ್ತೆ ಪೂರ್ಣವಾಗಿ ರಗ್ಗು ಎಳೆದು ಕೊಂಡು ಮಲಗುತ್ತಾನೆ. ಷೂ-ಪಾಲೀಷ್ ಹುಡುಗ ನಗುತ್ತಾ ಯುವಕ ಹಾಕಿಕೊಂಡಿದ್ದ ಷೂಗಳನ್ನು ನಿಧಾನ ವಾಗಿ ಬಿಚ್ಚಿ ಪಾಲೀಷ್ ಹಾಕಲು ಶುರುಮಾಡುತ್ತಾನೆ. ಒಮ್ಮೆ ಮಲಗಿದ್ದ ಯುವಕನನ್ನು ನೋಡಿ ಕೆಳಗೆ ಬಿದ್ದಿದ್ದ ಸಿಗರೇಟ್ ತುಂಡುಗಳನ್ನು ಆರಿಸಿಕೊಂಡು ಜೇಬಿಗೆ ಹಾಕಿಕೊಳ್ಳುತ್ತಾನೆ. ಮಂಚದ ತುದಿಯಲ್ಲಿ ಇಟ್ಟಿದ್ದ, ಉರಿಯುತ್ತಿರುವ ಸಿಗರೇಟಿನಿಂದ ಒಂದು ದಂ ಎಳೆದು ಅದನ್ನು ಅಲ್ಲೇ ಇಟ್ಟು ತನ್ನ ಕಾರ್ಯವನ್ನು ಪ್ರಾರಂಭಿಸುತ್ತಾನೆ.

೪

ಅಷ್ಟರಲ್ಲಿ ಮತ್ತೆ ರೂಮಿನ ಬಾಗಿಲು ತೆರೆದುಕೊಳ್ಳು ತ್ತದೆ. ಒಬ್ಬ ಕಸಗುಡಿಸುವ ತರುಣಿ ಪೊರಕೆಯ ಸಮೇತ ಬರುತ್ತಾಳೆ. ಬಾಗಿಲು ತೆರೆದ ಶಬ್ದದಿಂದ ಎಚ್ಚರಗೊಂಡ ಯುವಕ ಎದ್ದುಕೂತು, ಒಮ್ಮೆ ಭಾರಿಯಾಗಿ ಆಕಳಿಸಿ. ಪಕ್ಕದಲ್ಲಿ ಉರಿಯುತ್ತಿರುವ ಸಿಗರೇಟನ್ನು ಒಂದು ದಂ ಎಳೆದು ಬಿಸಾಡುತ್ತಾನೆ. ಕಸ ಗುಡಿಸುವ ತರುಣಿ ತನ್ನ

ಪಾಡಿಗೆ ತಾನು ಬಿದ್ದಿದ್ದ ಬಾಟಲುಗಳನ್ನು ಜೋಡಿಸುತ್ತಾ, ಒಂದೊಂದೇ ಚದುರಿದ ವಸ್ತುಗಳನ್ನು ಎತ್ತಿಟ್ಟು ಕಸಗುಡಿಸುತ್ತಿರುತ್ತಾಳೆ. ಯುವಕ ಅವಳನ್ನು ತನ್ನ ಕಣ್ಣುಗಳಿಂದ ಹೀರುವಂತೆ ನೋಡುತ್ತಾನೆ. ಷೂ-ಪಾಲೀಷ್ ಹಾಕುವ ಹುಡುಗ ಯುವಕನ ಮನಃಸ್ಥಿತಿಯನ್ನು ಅರಿತಿರುವಂತೆ ನೋಡುತ್ತಾನೆ. ಯುವಕ ಕೂಡಲೇ ಪಾಲೀಷ್ ಸಾಕೆಂದು ಸೂಚಿಸಿ. ದಿಂಬಿನ ಕೆಳಗಿದ್ದ ಒಂದು ರೂಪಾಯಿಯ ನೋಟನ್ನು ಹುಡುಗನ ಕಡೆಗೆ ಎಸೆಯುತ್ತಾನೆ. ಎಲ್ಲವನ್ನು ಅರಿತಂತೆ. ಪಾಲೀಷ್ ಹುಡುಗ ತುಂಟುನಗೆ ಬೀರಿ. ರೂಪಾಯಿಯನ್ನು ಎತ್ತಿಕೊಂಡು, ಸಲಾಂ ಮಾಡಿ ರೂಮಿನ ಬಾಗಿಲನ್ನು ಮುಚ್ಚಿಕೊಂಡು ಹೋಗುತ್ತಾನೆ.

೨೩

ಕಸಗುಡಿಸುವ ತರುಣಿಯನ್ನು ಯುವಕ ದಿಟ್ಟಿಸಿ ನೋಡುತ್ತಾ ಇದ್ದು. ಇದ್ದಕ್ಕಿದ್ದಂತೆ ಹೊದ್ದಿದ್ದ ರಗ್ ಪಕ್ಕಕ್ಕೆ ಎಸೆದು, ರೂಮಿನ ಬಾಗಿಲನ್ನು ಹಾಕುತ್ತಾನೆ. ತರುಣಿ ಭಯದಿಂದ ಗಾಬರಿಯಿಂದ ಯುವಕನ ಮುಖ ನೋಡುತ್ತಾಳೆ. ಡ್ರಾನಲ್ಲಿದ್ದ ಇನ್ನೊಂದು ಬೀರ್ ಬಾಟಲನ್ನು ತೆಗೆದು. ಸ್ವಲ್ಪ ಬೀರನ್ನು ಸುರಿದುಕೊಂಡು ಬಾಟಲನ್ನು ಟೇಬಲ್ ಮೇಲೆ ಇಡುತ್ತಾನೆ. ಅವಳ ಕಡೆ ನೋಡುತ್ತಾ, ಜೇಬಿನಿಂದ ಒಂದೆರಡು ನೋಟುಗಳನ್ನು ಅವಳಿಗೆ ದಾನ ಮಾಡಲು ಮುಂದಾಗುತ್ತಾನೆ. ಆ ತರುಣಿ ತನ್ನ ಮೂಕ ಉದ್ಗಾರಗಳಿಂದ ಅದನ್ನು ನಿರಾಕರಿಸುತ್ತಾ, ಬಾಗಿಲ ಕಡೆಗೆ ಸರಿಯುತ್ತಾಳೆ. ಇವನ ಮುಖದಲ್ಲಿ ಕಠೋರಭಾವ ಮೂಡುತ್ತದೆ. ತತ್‌ಕ್ಷಣ ಮುಂದೆ ಬಂದು ಹಣವನ್ನು ಉಡಿಯಲ್ಲಿ ಹಾಕಿ, ಹಾಸಿಗೆಯ ಕಡೆಗೆ ಕೈ

## ಟಿಪ್ಪಣಿ

ಟಿಪ್ಪಣಿ

ಹಿಡಿದು ಜಗ್ಗುತ್ತಾನೆ. ಅವಳು ಕೈಯನ್ನು ಕೊಡವಿಕೊಂಡು ಹಿಂದೆ ಸರಿಯುತ್ತಾಳೆ. ಯುವಕ ಅವಳನ್ನು ಹಿಡಿಯಲು ಮುಂದೆ ನುಗ್ಗುತ್ತಾನೆ. ತರುಣಿ ಮಂಚದ ಇನ್ನೊಂದು ಬದಿಗೆ ಓಡಿ ನಿಲ್ಲುತ್ತಾಳೆ. ಅವಳ ಮುಖದಲ್ಲಿ ಭಯ, ಅಸಹಾಯಕತೆ ಕಂಡುಬರುತ್ತದೆ. ಅವಳನ್ನು ಹಿಡಿಯಲು ಮುನ್ನುಗ್ಗಲು ಆಕೆ ಮಂಚದ ಮತ್ತೊಂದು ಬದಿಗೆ ಬರುತ್ತಾಳೆ. ಈ ಹಿಡಿಯುವಾಟ ಮುಂದುವರೆಯುತ್ತಿದ್ದಂತೆ ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ. ಆದರೆ ಹಿಡಿದಾಡುವ ಆಟದಲ್ಲಿ ಬಾಟಲುಗಳನ್ನು ಒದೆಯುವ, ಕುರ್ಚಿ ಬೀಳುವ ಸದ್ದಾಗುತ್ತದೆ. ಅನಂತರ ತರುಣಿ ಚೀರುವ ಧ್ವನಿಮೂಡಿಬರುತ್ತದೆ. ಚೀರುವ, ಬಿಕ್ಕುವ ಧ್ವನಿ ನಿಧಾನವಾಗಿ ಕ್ಷೀಣಿಸುತ್ತದೆ.

೬

ಮತ್ತೆ ರಂಗಸ್ಥಳದಲ್ಲಿ ನಿಧಾನವಾಗಿ ಬೆಳಕು ಮೂಡುತ್ತದೆ. ಅದೇ ಅಸ್ತವ್ಯಸ್ತಗೊಂಡ ಕೊಠಡಿ. ರಗ್ಗನ್ನು ತಲೆಯವರೆಗೂ ಹೊದ್ದುಕೊಂಡು ಯುವಕ ಬಿದ್ದುಕೊಂಡಿದ್ದಾನೆ. ತರುಣಿ ಇಲ್ಲ. ಆದರೆ ಆಕೆ ತಂದಿದ್ದ ಪೊರಕೆ ಮತ್ತು ಹರಿದ 'ಬ್ರಾ' ಬಾಗಿಲ ಬಳಿ ಬಿದ್ದಿರುತ್ತದೆ. ಟೇಬಲ್ ಮೇಲಿನ ಗಡಿಯಾರ ನಿಂತುಹೋಗಿದೆ. ಬೀರ್ ಇದ್ದ ಶೀಸೆಯೂ ಟೇಬಲ್ ಮೇಲಿದೆ.

ರೂಮಿನ ಬಾಗಿಲು ಬಡಿಯುವ ಶಬ್ದ. ಯುವಕ ಹಾಗೇ ಮಲಗಿಕೊಂಡಿರುತ್ತಾನೆ. ಮತ್ತೆ ಬಾಗಿಲು ಬಡಿಯುವ ಸದ್ದು. ಸ್ವಲ್ಪ ಸಮಯದ ನಂತರ ಬಾಗಿಲು ತೆರೆದುಕೊಳ್ಳುತ್ತದೆ. ಕಸಗುಡಿಸುವ ತರುಣಿ ಬದಲಾದ ಸೀರೆಯೊಂದಿಗೆ ಮೊದಲು ಬಂದು ನಿಲ್ಲುತ್ತಾಳೆ.

ತಕ್ಕಮಟ್ಟಿಗೆ ಅಚ್ಚುಕಟ್ಟಾಗಿ ಅಲಂಕಾರ ಮಾಡಿಕೊಂಡಿದ್ದಾಳೆ. ಬಾಗಿಲು ತೆರೆದ ಮೇಲೆ ಹಾಸಿಗೆಯ ಮೇಲಿದ್ದ ಯುವಕ ಹೊದ್ದಿದ್ದ ರಗ್ಗನ್ನು ಸರಿಸಿ, ನಕ್ಕು, ಹಾಸಿಗೆಗೆ ಬರುವಂತೆ ಆಹ್ವಾನಿಸುತ್ತಾನೆ. ಕಸ ಗುಡಿಸುವ ಹುಡುಗಿ ಗಂಭೀರವಾಗಿ ನಿಂತಿರುತ್ತಾಳೆ.

ಇದ್ದಕ್ಕಿದ್ದಂತೆ ಸಮವಸ್ತ್ರ ಧರಿಸಿದ ಯುವಕರ ತಂಡ ಒಳಗೆ ನುಗ್ಗುತ್ತದೆ. ಹಾಸಿಗೆಯ ಮೇಲಿನ ಯುವಕ ಕುತೂಹಲದಿಂದ, ಆಶ್ಚರ್ಯದಿಂದ ಎದ್ದುಕುಳಿತುಕೊಳ್ಳುತ್ತಾನೆ. ಬಂದವರು ಯಾರೂ ಮಾತನಾಡುವುದಿಲ್ಲ. ಬಂದವರಲ್ಲಿ ಇಬ್ಬರು ಯುವಕನ ಬಳಿಗೆ ಬಂದು ಅವನನ್ನು ಬಲವಂತವಾಗಿ ಎಬ್ಬಿಸಿ ನಿಲ್ಲಿಸುತ್ತಾರೆ. ಯುವಕ ಗರಬಡಿದವನಂತೆ ಇದ್ದು, Get-out ಎಂದು ಕೂಗಲು ಪ್ರಾರಂಭಿಸಿದ ಕೂಡಲೇ, ಅವನ ಬಾಯಿಮುಚ್ಚಿ ಕರವಸ್ತ್ರವನ್ನು ಬಾಯಿಗಿಟ್ಟು, ಕೈಗಳನ್ನು ಹಿಂದೆ ಕಟ್ಟುತ್ತಾರೆ. ಬಂದವರಲ್ಲಿ ಒಬ್ಬ, ನಿಂತ ಗಡಿಯಾರಕ್ಕೆ ಕೀ ಕೊಟ್ಟು ವೇಳೆಯನ್ನು ಸರಿಮಾಡಿ, ಟೇಬಲ್ ಮೇಲೆ ಇಡುತ್ತಾನೆ. ಅಲ್ಲಿದ್ದ ಬೀರ್ ಶೀಸೆಯನ್ನು ನೋಡಿ, ಅದರಲ್ಲಿದ್ದ ಬೀರ್‌ಅನ್ನು Bath-roomನಲ್ಲಿ ಸುರಿಯುತ್ತಾನೆ. ಇನ್ನೊಬ್ಬ ಕಸದ ಬುಟ್ಟಿಯಲ್ಲಿದ್ದ ವಾರ್ತಾಪತ್ರಿಕೆಯನ್ನು ಹೊರ ತೆಗೆದು ಖಾಲಿಬಾಟಲುಗಳನ್ನು ಕಸದ ಬುಟ್ಟಿಯಲ್ಲಿ ತುಂಬುತ್ತಾನೆ. ಅಲ್ಲಲ್ಲಿ ಬಿದ್ದಿದ್ದ ಇಸ್ಪೀಟ್ ಎಲೆಗಳನ್ನು ಕೂಡಿಸುತ್ತಾನೆ. ಹಾಸಿಗೆ ಕೆಳಗಿದ್ದ, ಟೇಬಲ್ ಮೇಲಿದ್ದ ಪುಸ್ತಕಗಳ ಮಧ್ಯೆ ಇದ್ದ ಇಸ್ಪೀಟ್ ಎಲೆಗಳನ್ನು, Sexy ಚಿತ್ರಗಳುಳ್ಳ ಪತ್ರಿಕೆಗಳನ್ನು ಮಂಚದ ಮುಂಭಾಗದಲ್ಲಿ ರಾಶಿಮಾಡುತ್ತಾನೆ. ರೂಮಿನ ಅಸ್ತವ್ಯಸ್ತತೆಯನ್ನು ಆದಷ್ಟೂ ಸರಿಪಡಿಸುತ್ತಾರೆ. ಕಿಟಕಿ ಬಾಗಿಲನ್ನು ತೆರೆಯುತ್ತಾರೆ. ರೂಮಿನ ಕಸವನ್ನೆಲ್ಲಾ ಒಂದು ಕಡೆಗೆ ತಳ್ಳಿ, ಕೊಳೆಯಾದ

## ಟಿಪ್ಪಣಿ

## ಟಿಪ್ಪಣಿ

ಬಟ್ಟೆಗಳನ್ನೆಲ್ಲಾ ಒಂದು ರಾಶಿಮಾಡುತ್ತಾರೆ. ಹಾಸಿಗೆಯನ್ನು ಒದರಿ ಅಚ್ಚುಕಟ್ಟು ಮಾಡುತ್ತಾರೆ. ಯುವಕ ದಿಕ್ಕು ತೋಚದೆ ಇಬ್ಬರ ಹಿಡಿತದಲ್ಲಿ ನಿಂತು ನೋಡುತ್ತಿರುತ್ತಾನೆ. ಕಸಗುಡಿಸುವ ತರುಣಿಯೂ ಗಂಭೀರಳಾಗಿ ನಿಂತಿರುತ್ತಾಳೆ.

ಬಂದ ಯುವಕರಲ್ಲಿ ಒಬ್ಬ ಸಿದ್ಧಪಡಿಸಿದ ಕಾಗದ ಪತ್ರಗಳನ್ನು ಹೊರತೆಗೆಯುತ್ತಾನೆ. ಲೇಖನಿಯನ್ನು ಹೊರತೆಗೆಯುತ್ತಾನೆ. ರೂಮಿನ ಯುವಕನ ಕೈಗಳನ್ನು ಬಿಚ್ಚಿ, ಅದಕ್ಕೆ ಸಹಿ ಮಾಡುವಂತೆ ಹೂಂಕರಿಸುತ್ತಾರೆ. ಅವನು ನಿರಾಕರಿಸುತ್ತಾನೆ. ಅವನನ್ನು ಹಿಡಿದುಕೊಂಡಿದ್ದ ವರಲ್ಲಿ ಒಬ್ಬ ಯುವಕ ಕುಂಡಿಗೆ ಒದೆಯುತ್ತಾನೆ. ಆಗ ಯುವಕ ವಿಧಿಯಿಲ್ಲದೆ, ಭಯದಿಂದ ಸಹಿ ಮಾಡುತ್ತಾನೆ. ಕಸಗುಡಿಸುವ ಮೂಕತರುಣಿಯೂ ಆ ಕಾಗದಪತ್ರಗಳಿಗೆ ಸಹಿ ಹಾಕುತ್ತಾಳೆ. ಬಂದಿದ್ದ ಯುವಕರಲ್ಲೊಬ್ಬ, ರಾಶಿ ಹಾಕಿದ್ದ ಇಸ್ಪೀಟ್ ಎಲೆಗಳಿಗೆ ಮತ್ತು Sexy ಪತ್ರಿಕೆಗಳಿಗೆ ಬೆಂಕಿ ಹಚ್ಚುತ್ತಾನೆ . ಯುವಕನ ಷರಟು, ಪ್ಯಾಂಟ್ ಗಳನ್ನು ಕಳಚಿ, ತಂದಿದ್ದ ಸಮವಸ್ತ್ರ ಹಾಕಿಸುತ್ತಾರೆ. ಅವನು ಎಲ್ಲವನ್ನೂ ಯಾಂತ್ರಿಕವಾಗಿ ಮಾಡುತ್ತಾನೆ. ಯುವಕರು ತಂದಿದ್ದ ಹಾರಗಳನ್ನು ಪರಸ್ಪರ ಹಾಕಿಸುತ್ತಾರೆ. ಬಾಯಿಗೆ ತುರುಕಿದ್ದ ಕರವಸ್ತ್ರವನ್ನು ತೆಗೆಯುತ್ತಾರೆ. ಹಿನ್ನೆಲೆಯಲ್ಲಿ ನಿಧಾನವಾಗಿ ಲಯಬದ್ಧವಾದ ವಾದ್ಯದ ಸದ್ದು ಕೇಳಿಬರುತ್ತದೆ. ಯುವಕರು ಉರಿಯ ಸುತ್ತ ಸುತ್ತುತ್ತಾರೆ. ಅನಂತರ ಕಸಗುಡಿಸುವ ಮೂಕತರುಣಿ ಮತ್ತು ಹಾಸಿಗೆಯ ಯುವಕನನ್ನು ಸೇರಿಕೊಳ್ಳುವಂತೆ ಎಳೆಯುತ್ತಾರೆ. ಆ ಯುವಕ ನಿಧಾನವಾಗಿ ಬಂದಿದ್ದ ಯುವಕರ ಹೆಜ್ಜೆಯ ಗತಿಗೆ ಹೊಂದಿಕೊಳ್ಳುತ್ತಾನೆ. ಬಂದವರು ಇಬ್ಬಿಬ್ಬರಾಗಿ ಅದೇ ಗತಿಯಲ್ಲಿ ತೆರಳುತ್ತಾರೆ. ಕೊನೆಯಲ್ಲಿ ಯುವಕ ಮತ್ತು ಮೂಕತರುಣಿ ಪರಸ್ಪರ

ನೋಡಿಕೊಂಡು, ಅದೇಗತಿಯಲ್ಲಿ ರೂಮಿನಿಂದ ಹೊರಗೆ ತೆರಳುತ್ತಾರೆ.

ದೀಪ ನಿಧಾನವಾಗಿ ಕ್ಷೀಣಿಸುತ್ತದೆ. ಹಿನ್ನೆಲೆಯ ವಾದ್ಯಸಂಗೀತವೂ ನಿಧಾನವಾಗಿ ಕ್ಷೀಣಿಸುತ್ತದೆ. ಕೊನೆಯಲ್ಲಿ ರಂಗಸ್ಥಳದ ಮೇಲೆ ಬೆಂಕಿಯ ಉರಿ ಮತ್ತು ಕಿಟಿಕಿಯಿಂದ ಬರುವ ಬೆಳಕು ಮಾತ್ರ ಕಂಡುಬರುತ್ತದೆ.

-ತೆರೆ-

ಟಿಪ್ಪಣಿ

## ಪಾತ್ರಗಳು

ಮುದುಕ

ಯುವಕ

ಮಾರ್ವಾಡಿ

ಜಮೀನ್ದಾರ

ರಾಜಕಾರಣಿ

ವ್ಯಕ್ತಿ-೧

ಡಾಕ್ಟರ್

ವ್ಯಕ್ತಿ-೨

# ಯೋಚಿಸಿ ?

ಒಂದು ಉದ್ಯಾನ. ಉದ್ಯಾನದ ಮಧ್ಯಭಾಗದಲ್ಲಿ ಒಂದು ಅಶೋಕಸ್ಥಂಭ. ಅದರ ನಾಲ್ಕೂ ಕಡೆ ಕೂಡಲು ಬೆಂಚುಗಳು. ಆ ಅಶೋಕಸ್ಥಂಭ ಹೂವಿನಕುಂಡ ಗಳಿಂದ ಅಲಂಕೃತವಾಗಿದೆ. ರಂಗಮಂಚದ ಮೇಲೆ ನಿಧಾನ ವಾಗಿ ಬೆಳಕು ಮೂಡಿದಾಗ ಆ ಸ್ಥಂಭದ ಬಳಿ ಒಬ್ಬ ಮುದುಕ ಕುಳಿತಿರುತ್ತಾನೆ. ಮಳೆಬರುವ ಸೂಚನೆ ಕಂಡು ಬರುತ್ತದೆ. ಹರಕುಬಟ್ಟೆಯ ಮುದುಕ ಇದನ್ನು ಗಮನಿಸಿ ಊರುಗೋಲನ್ನು ಊರಿಕೊಂಡು ಕೆಮ್ಮಿಕೊಂಡು ನಿರ್ಗ ಮಿಸುತ್ತಾನೆ. ಮಳೆ ಬರುವ ಸೂಚನೆ ಗಾಳಿ, ಗುಡುಗು, ಮಿಂಚಿನಲ್ಲಿ ಕಾಣಿಸಿಕೊಳ್ಳುತ್ತದೆ. ಆ ಅಶೋಕಸ್ಥಂಭದ ಅಕ್ಕಪಕ್ಕದಲ್ಲಿ ಕಟ್ಟಿದ ಜಾಹಿರಾತು ಬಟ್ಟೆಗಳು ಗಾಳಿಗೆ ಪಟಪಟನೆ ಹೊಡೆದುಕೊಳ್ಳುತ್ತವೆ. ಈ ಜಾಹಿರಾತು ಬಟ್ಟೆ ಗಳಲ್ಲಿ 'ಬರಲಿದೆ !', 'ಯೋಚಿಸಿ? ', 'ಕಾಯುತ್ತಿರಿ!!' ಎಂದು ದೂರಕ್ಕೆ ಕಾಣುವಂತೆ ಬರೆದಿರುತ್ತದೆ.

೧

ಮೇಲಿನ ವಾತಾವರಣದಲ್ಲಿ ಅರೆತೋಳ ನೆಟ್‌ಬನೀನ್ ಹಾಕಿಕೊಂಡು, ಮೇಲಕ್ಕೆ ಮಡಿಚಿದ, ಕೊಳೆಯಾದ

## ಟಿಪ್ಪಣಿ

ಪ್ಯಾಂಟ್ ಧರಿಸಿದ ಯುವಕನೊಬ್ಬ ಓಡಿಬಂದು, ಆಶ್ರಯಪಡೆಯಲು ಪರದಾಡಿ, ಕೊನೆಗೆ ಅಶೋಕಸ್ಥಂಭದ ಪಕ್ಕದಲ್ಲಿ ಮುದುರಿಕೊಂಡು, ನಡುಗುತ್ತಾ ಕೂಡುತ್ತಾನೆ. ಆ ಸ್ಥಂಭದ ಬಳಿ ಎಷ್ಟು ಅಂಟಿಕೊಂಡು ಕುಳಿತರೂ ಅವನಿಗೆ ಛಳಿ ಕಡಿಮೆಯಾಗುವುದಿಲ್ಲ. ಮೈಕೈ ತಿಕ್ಕಿ ಕೊಳ್ಳುತ್ತಾನೆ. ತೊಡೆ ಕೈಕಾಲುಗಳನ್ನು ಬಡಿದುಕೊಳ್ಳು ತ್ತಾನೆ. ನೆಟ್‌ಬನೀನ್ ಒಳಗೆ ಕೈಗಳನ್ನು ತೂರಿಸಿ, ಮೊಣಕಾಲಿಗೆ ತಲೆ ಆನಿಸಿ ಛಳಿ ತಡೆಯಲು ಪ್ರಯತ್ನಿಸು ತ್ತಾನೆ. ಆದರೆ ಯಾವುದೂ ಅವನಿಗೆ ಸಮಾಧಾನ ನೀಡುವುದಿಲ್ಲ. ಆಗ, ಪಟಪಟ ಎಂದು ಬಡಿದುಕೊಳ್ಳು ತ್ತಿರುವ ಜಾಹಿರಾತಿನ ಬಟ್ಟೆಗಳ ಕಡೆಗೆ ಅವನ ಗಮನ ಹರಿಯುತ್ತದೆ. ಮೆಲ್ಲನೆ ಎದ್ದು ಆ ಜಾಹಿರಾತಿನ ಬಟ್ಟೆ ಯನ್ನು ಬಿಚ್ಚಲು ಪ್ರಯತ್ನಿಸಿ, ಸುತ್ತೂ ಒಮ್ಮೆ ನೋಡು ತ್ತಾನೆ. ಯಾರೋ ಬರುವುದನ್ನು ಗಮನಿಸಿ ಅಲ್ಲಿಯೇ ಕೂಡುತ್ತಾನೆ. ಒಬ್ಬ ಯುವಕ ಸೈಕಲ್ ತುಳಿದುಕೊಂಡು ಹಾದುಹೋಗುತ್ತಾನೆ. ಅವನು ಹೋದಮೇಲೆ ಈ ಯುವಕ 'ಯೋಚಿಸಿ?' ಎಂದು ಇರುವ ಜಾಹಿರಾತು ಬಟ್ಟೆಯನ್ನು ಬಿಚ್ಚುತ್ತಾನೆ. ಅದನ್ನು ತನ್ನ ಮೈಗೆ ಸುತ್ತಿಕೊಂಡು, ಖುಷಿಯಿಂದ ಆ ಸ್ಥಂಭದ ಹತ್ತಿರ ಮೆರೆದಾಡುತ್ತಾನೆ. ಆ ಹೊತ್ತಿಗೆ ಮಳೆಬರುವ ಸೂಚನೆ ಕಡಿಮೆಯಾಗುತ್ತದೆ. ಆ ಜಾಹಿರಾತು ಬಟ್ಟೆಯನ್ನು ಸುತ್ತಿ ಕೊಂಡೇ ತಾನು ಮೊದಲು ಕುಳಿತುಕೊಂಡಿದ್ದ ಸ್ಥಳಕ್ಕೆ ಬಂದು ಮುದುಡಿಕೊಂಡು ಮಲಗುತ್ತಾನೆ.

೩

ಆ ಯುವಕ ಮುದುಡಿಕೊಂಡು ಮಲಗಿದ ಕೂಡಲೇ ರಂಗಮಂಚದ ಮೇಲೆ ಬೆಳಕು ಕ್ಷೀಣಿಸುತ್ತದೆ. ಅನಂತರ

ನಿಧಾನವಾಗಿ ನೀಲಿಯ ಮಂದಬೆಳಕು ರಂಗಮಂಚವನ್ನು ಆವರಿಸುತ್ತದೆ. ಹಿನ್ನೆಲೆಯಲ್ಲಿ ಸ್ವಪ್ನವಾತಾವರಣವನ್ನು ಸೂಚಿಸುವ ಸಂಗೀತ ನಿಧಾನವಾಗಿ ತೇಲಿಬಂದು ನಿಧಾನವಾಗಿ ಕ್ಷೀಣಿಸುತ್ತದೆ. ಆಗ ಜಾಹಿರಾತು ಬಟ್ಟೆಯನ್ನು ಸುತ್ತಿಕೊಂಡಿದ್ದ ಯುವಕ ನಿಧಾನವಾಗಿ ಏಳುತ್ತಾನೆ. ಅಶೋಕಸ್ಥಂಭವನ್ನು ಒಮ್ಮೆ ಗಂಭೀರವಾಗಿ ನೋಡುತ್ತಾನೆ. ಅಲ್ಲಿಂದ, ಗಂಭೀರವಾಗಿ ಹೆಜ್ಜೆ ಹಾಕುತ್ತಾ, ರಂಗಮಂಚದ ಮುಂಭಾಗಕ್ಕೆ ಬರುತ್ತಾನೆ. ಬೆಳಕು ಅವನ ಮೇಲೆ ಕೇಂದ್ರೀಕೃತವಾಗಿ, ನಿಧಾನವಾಗಿ ಕ್ಷೀಣಿಸಿ, ಕತ್ತಲೆ ಆವರಿಸುತ್ತದೆ.

೪

ರಂಗಮಂಚದ ಮುಂಭಾಗದ ಎಡತುದಿಯ ಕಿಟಿಕಿ-ರಂಗಸ್ಥಳ(Window-Stage)ದಲ್ಲಿ ಅಥವಾ Spot ಬೆಳಕಿನ ಆವರಣದಲ್ಲಿ ಒಬ್ಬ ಮಾರ್ವಾಡಿ ತನ್ನ ಸಡಿಲ ಕನ್ನಡಕವನ್ನು ಸರಿಪಡಿಸಿಕೊಳ್ಳುತ್ತಾ ವಾಟದ ಮೇಜಿನ ಮೇಲೆ ಉದ್ದನೆ ಕೆಂಪು ರೋಜುವರ್ಗದ ಪುಸ್ತಕವನ್ನು ಹರಡಿಕೊಂಡು ಲೆಕ್ಕ ಬರೆಯುತ್ತಿರುತ್ತಾನೆ. ಆಗಾಗ ಹಣವನ್ನು ಎಣಿಸಿ ಲೆಕ್ಕ ಹಾಕುತ್ತಿರುತ್ತಾನೆ. ಅಶೋಕ ಸ್ಥಂಭದ ಬಳಿ ಕಾಣಿಸಿಕೊಂಡ ಯುವಕ ಓಡೋಡಿ ಬಂದು, ತನ್ನ ಕೈಯಲ್ಲಿದ್ದ ವಾಚನ್ನು ಬಿಚ್ಚಿ, ಅವನ ಮುಂದಿಟ್ಟು ಹಣ ಕೇಳುತ್ತಾನೆ. ಅವನು ಅದನ್ನು ಚೆನ್ನಾಗಿ ಪರೀಕ್ಷಿಸಿ ಪಕ್ಕದಲ್ಲಿಟ್ಟುಕೊಂಡು ಐವತ್ತು ರೂಪಾಯಿಗಳನ್ನು ಎಣಿಸಿ ಕೊಡುತ್ತಾನೆ. ಯುವಕ ನೂರು ಕೇಳುತ್ತಾನೆ. ಮಾರ್ವಾಡಿ ಒಪ್ಪದೆ ಕೊನೆಯಲ್ಲಿ ಹತ್ತು ರೂಪಾಯಿಗಳನ್ನು ಮಾತ್ರ ಹೆಚ್ಚಿಗೆ ಕೊಡುತ್ತಾನೆ. ಯುವಕ ನಿಧಾನವಾಗಿ ಭಾರವಾದ ಹೆಜ್ಜೆಗಳನ್ನು ಹಾಕುವುದರಲ್ಲಿರುವಾಗ, ದೂರದಿಂದ ಒಬ್ಬ

ಟಿಪ್ಪಣಿ

## ಟಿಪ್ಪಣಿ

ವ್ಯಕ್ತಿ 'ರಾಜೂ……' ಎಂದು ಕೂಗಿಕೊಂಡು ಓಡಿ ಬಂದು, ಯುವಕನನ್ನು ನಿಲ್ಲಿಸಿ, ಅವನ ತಾಯಿ ತೀರಿ ಹೋದರೆಂದು ಸನ್ನೆಯ ಮೂಲಕ ತಿಳಿಸುತ್ತಾನೆ. ಯುವಕ ಚೀರಿಕೊಂಡು ಅಳುತ್ತಾನೆ. ಬಂದ ವ್ಯಕ್ತಿ ಸಂತೈಸುತ್ತಾ ಕರೆದುಕೊಂಡು ಹೋಗುತ್ತಾನೆ. ಇದೆಲ್ಲವನ್ನು ನೋಡು ತ್ತಿದ್ದ ಮಾರ್ವಾಡಿ, ಅವರು ಹೋದಮೇಲೆ ವಾಚನ್ನು ಭದ್ರಪಡಿಸಿ, ತನ್ನ ರೋಜುವರ್ಗ ಲೆಕ್ಕಾಚಾರದಲ್ಲಿ ನಿರತ ನಾಗುತ್ತಾನೆ. ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ.

೫

ಬಲತುದಿ ಕಿಟಿಕಿ-ರಂಗಸ್ಥಳದಲ್ಲಿ ಬೆಳಕು ನಿಧಾನವಾಗಿ ಮೂಡುತ್ತದೆ. ಒಂದು ಹಳೆಯಕಾಲದ ದರ್ಬಾರು ಕುರ್ಚಿಯ ಮೇಲೆ ಒಬ್ಬ ದಢೂತಿ ಜಮೀನ್ದಾರ ಕುಳಿತು ಮೀಸೆ ಹುರಿಗೊಳಿಸುತ್ತಿರುತ್ತಾನೆ. ಪಕ್ಕದಲ್ಲಿದ್ದ ಹಳೆಯಕಾಲದ ಮೇಜಿನ ಮೇಲೆ ಮದ್ಯದ ಸೀಸೆ, ಲೋಟ ಇರುತ್ತದೆ. ಅದರ ಪಕ್ಕದಲ್ಲಿ ಗಿಣಿ ಇರುವ ಪಂಜರವಿರುತ್ತದೆ. ಜಮೀನ್ದಾರ ಆಗಾಗ ಮದ್ಯವನ್ನು ಸೇವಿಸುತ್ತಾ, ಗಿಣಿಯನ್ನು ಆಟವಾಡಿಸುತ್ತಿರುತ್ತಾನೆ. ಹಿನ್ನೆಲೆಯಲ್ಲಿ ದೊಪ್ಪೆಂದು ಶಬ್ದವಾಗುತ್ತದೆ. ಜಮೀನ್ದಾರ ಹಿಂತಿರುಗಿ ನೋಡಿ "ಲೋ… ಯಂಕಾ…" ಎಂದು ಕೂಗುತ್ತಾನೆ. ಒಂದೆರಡು ಕ್ಷಣದಲ್ಲಿ ಅಶೋಕಸ್ತಂಭದ ಬಳಿ ಕಾಣಿಸಿಕೊಂಡ ಯುವಕ ಕುಡುಗೋಲನ್ನು ಹಿಡಿದು ಪ್ರವೇಶಿಸಿ, ಭಯಭಕ್ತಿಯಿಂದ ನಿಲ್ಲುತ್ತಾನೆ. ಅವನ ಮೈ ಮೇಲೆ ಹುಲ್ಲಿನಕಡ್ಡಿ, ಧೂಳು ಅಲ್ಲಲ್ಲಿ ಮೆತ್ತಿಕೊಂಡಿ ರುತ್ತದೆ. ಜಮೀನ್ದಾರ ಅಮಲಿನಲ್ಲಿ ಅವನನ್ನು ಮುಂದೆ ಕೂತುಕೊಳ್ಳುವಂತೆ ಸನ್ನೆಮಾಡುತ್ತಾನೆ. ಕುಡು ಗೋಲನ್ನು ಮೇಜಿನ ಕೆಳಗಿರಿಸಿ ಜಮೀನ್ದಾರನ ಮುಂದೆ

ಕೊಡುತ್ತಾನೆ. ಜಮೀನ್ದಾರ ಯುವಕನ ಹೆಗಲಿನ ಮೇಲೆ ಕಾಲು ಹಾಕುತ್ತಾನೆ. ಯುವಕ ತಲೆತಗ್ಗಿಸಿಕೊಂಡು ಕಾಲು ಒತ್ತಲು ಪ್ರಾರಂಭಿಸುತ್ತಾನೆ. ಹಿನ್ನೆಲೆಯಲ್ಲಿ ಗೆಜ್ಜೆಯ ಸದ್ದು ಕೇಳಿಸುತ್ತದೆ. ಜಮೀನ್ದಾರ ಅದನ್ನು ಆಲಿಸಿ, ಯುವಕನ ಹೆಗಲ ಮೇಲಿರಿಸಿದ್ದ ಕಾಲನ್ನು ತೆಗೆದು, ಅವನನ್ನು ಒದ್ದು, ತೂರಾಡಿಕೊಂಡು ಹೋಗುತ್ತಾನೆ. ಯುವಕ ಯಾವ ಪ್ರತಿಕ್ರಿಯೆಯನ್ನೂ ಸೂಚಿಸದೆ, ಮೇಲಕ್ಕೆದ್ದು ಪಂಜರದ ಗಿಣಿಗೆ ಒಂದೆರಡು ಕಾಳನ್ನು ತಿನ್ನಿಸಿ, ಕುಡುಗೋಲನ್ನು ಎತ್ತಿಕೊಂಡು ಹೋಗುತ್ತಾನೆ. ಗೆಜ್ಜೆಯ ನಾದ ಹೆಚ್ಚಾದಂತೆ ಬೆಳಕು ಕ್ಷೀಣಿಸುತ್ತದೆ. ಅನಂತರ ಗೆಜ್ಜೆಯ ನಾದವೂ ಕ್ಷೀಣಿಸುತ್ತದೆ.

೬

ಮತ್ತೆ ಎಡತುದಿ ರಂಗಸ್ಥಳದಲ್ಲಿ ಬೆಳಕು ನಿಧಾನ ವಾಗಿ ಮೂಡುತ್ತದೆ. ಒಬ್ಬ ರಾಜಕಾರಣಿ ಶತಪಥ ತಿರುಗುತ್ತಿರುತ್ತಾನೆ. ಅವನ ಹಿನ್ನೆಲೆಯಲ್ಲಿ ಗಾಂಧಿಯ ದೊಡ್ಡ ಭಾವಚಿತ್ರವಿದೆ. ಯಾವುದೋ ಸಮಸ್ಯೆಯಲ್ಲಿ ಸಿಕ್ಕಿಕೊಂಡವನಂತಿರುತ್ತಾನೆ. ಅಷ್ಟರಲ್ಲಿ ಅಶೋಕಸ್ತಂಭದ ಬಳಿಯ ಯುವಕ ಬರುತ್ತಾನೆ. ಅವನು ಬಂದ ಕೂಡಲೇ ಸಮಾಧಾನ ಹೊಂದಿ, ಹತ್ತಿರ ಬರುವಂತೆ ಸನ್ನೆಮಾಡಿ, ಕಿವಿಯಲ್ಲಿ ಯಾರನ್ನೋ ಮುಗಿಸುವಂತೆ ಹೇಳುತ್ತಾನೆ. ಅನಂತರ ಗಾಂಧಿ ಭಾವಚಿತ್ರದ ಬಳಿಗೆ ಹೋಗಿ, ಅದರ ಹಿಂದೆ ಇರಿಸಿದ ಒಂದು ಬಟ್ಟೆಯ ಗಂಟನ್ನು ತಂದು ಟೇಬಲ್ಲಿನ ಮೇಲಿಡುತ್ತಾನೆ. ಅದನ್ನು ಬಿಚ್ಚಿದಾಗ ಅದರಲ್ಲಿ ಒಂದು ಪಿಸ್ತೂಲ್ ಇರುತ್ತದೆ. ಅದನ್ನು ಅವನಿಗೆ ತೋರಿಸಿ ಮತ್ತೊಮ್ಮೆ ಸೂಚನೆಯನ್ನು ಕೊಡುತ್ತಾನೆ. ಯುವಕ ಇದೆಲ್ಲವನ್ನೂ ಗಂಭೀರವಾಗಿ ನೋಡುತ್ತಾ ಇದ್ದು,

ಟಿಪ್ಪಣಿ

ಟಿಪ್ಪಣಿ

ಪಿಸ್ತೂಲನ್ನು ತೆಗೆದುಕೊಂಡು ತನ್ನ ಕೋಟಿನಲ್ಲಿ ಮುಚ್ಚಿಟ್ಟುಕೊಳ್ಳುತ್ತಾನೆ. ಬಂದ ದಾರಿಯಲ್ಲಿ ಹಿಂತಿರುಗುತ್ತಾನೆ. ಮರೆಯಾದ ಕೆಲವು ಸೆಕೆಂಡುಗಳಲ್ಲಿ ರಾಜಕಾರಣಿ "ಮೈಕೇಲ್......' ಎಂದು ಕೂಗುತ್ತಾನೆ. ಯುವಕ ಗಂಭೀರ ಮುಖಭಾವದಿಂದ ಹಿಂತಿರುಗಿಬಂದು ನಿಲ್ಲುತ್ತಾನೆ. ರಾಜಕಾರಣಿ ಟೇಬಲ್ಲಿನ 'ಡ್ರಾ' ತೆಗೆದು ಒಂದು ನೋಟಿನ ಕಂತೆಯನ್ನು ಕೊಡುತ್ತಾನೆ. ಯುವಕ ಅದನ್ನು ಸ್ವೀಕರಿಸಿ, ಕೋಟಿನ ಜೇಬಿನಲ್ಲಿಟ್ಟುಕೊಂಡು, ಮತ್ತೆ ಬಂದ ದಾರಿಯಲ್ಲಿ ಹಿಂತಿರುಗುತ್ತಾನೆ. ರಾಜಕಾರಣಿ ಗಾಂಧಿಗೆ ಒಮ್ಮೆ ನಮಸ್ಕರಿಸಿ, ದೀರ್ಘವಾದ ನಿಟ್ಟುಸಿರನ್ನು ಬಿಟ್ಟು ಕುಳಿತುಕೊಂಡು ಆಲೋಚನಾಮಗ್ನನಾಗುತ್ತಾನೆ. ರಂಗಸ್ಥಳದಲ್ಲಿ ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ.

೭

ಬಲಗಡೆ ಕಿಟಿಕಿ-ರಂಗಸ್ಥಳದಲ್ಲಿ ನಿಧಾನವಾಗಿ ಬೆಳಕು ಮೂಡುತ್ತದೆ. ಕಾಂಪೌಂಡು ಬಾಗಿಲು. ಹಿನ್ನೆಲೆಯಲ್ಲಿ ಮನೆ. ಕಾಂಪೌಂಡು ಬಾಗಿಲ ಮೇಲೆ ದೊಡ್ಡದಾಗಿ 'ರಕ್ತ ನೀಡುವ ಕೇಂದ್ರ' ಎಂದು ಬರೆದಿದೆ. ಅದಕ್ಕೆ ಸಂಬಂಧಿಸಿದ ಭಿತ್ತಿಚಿತ್ರಗಳನ್ನು ಅಲ್ಲಿ ನಿಲ್ಲಿಸಿದ್ದಾರೆ. ಅದರ ಮುಂದೆ ಒಬ್ಬ ವ್ಯಕ್ತಿ ಬೀಡಿ ಸೇದುತ್ತಾ ನಿಂತಿರುತ್ತಾನೆ. ಮನೆಯ ಒಳಗಿನಿಂದ ಒಬ್ಬಾತ ನಿಧಾನವಾಗಿ ಬಂದು, ನಿಶ್ಶಕ್ತಿಯಿಂದ ಐದು ರೂಪಾಯಿಗಳನ್ನು ಎಣಿಸಿ, ಅದರಲ್ಲಿ ಒಂದು ರೂಪಾಯಿಯನ್ನು ಬಾಗಿಲು ಬಳಿ ನಿಂತಿದ್ದ ವ್ಯಕ್ತಿಗೆ ಕೊಟ್ಟು ನಿಧಾನವಾಗಿ ಮುನ್ನಡೆಯುತ್ತಾನೆ. ಕೆಲವು ಕ್ಷಣಗಳಲ್ಲಿ ಅಶೋಕಸ್ತಂಭದ ಬಳಿ ಇದ್ದ ಯುವಕ ಆಯಾಸಗೊಂಡು, ಬೆವರನ್ನು ಒರೆಸಿಕೊಳ್ಳುತ್ತಾ, ನಿಧಾನವಾಗಿ ನಡೆಯುತ್ತಾ, ಗೇಟನ್ನು ದಾಟುತ್ತಾನೆ. ಬೀಡಿ

ಸೇದುತ್ತಿದ್ದ ವ್ಯಕ್ತಿ ಇದನ್ನು ಗಮನಿಸಿ, ಬೀಡಿಯನ್ನು ಬಿಸಾಡಿ, 'ಸಲೀಂ' ಎಂದು ಕೂಗುತ್ತಾನೆ. ಯುವಕ ನಿರುತ್ಸಾಹದಿಂದ ಹಿಂತಿರುಗಿ ಬಂದು ಒಂದು ರೂಪಾಯಿ ನೋಟನ್ನು ವ್ಯಕ್ತಿಯ ಕೈಯಲ್ಲಿ ಇಟ್ಟು ನಿಶ್ಶಕ್ತಿಯಿಂದ ಮುಂದೆ ಸಾಗುತ್ತಾನೆ. ಗೇಟಿನ ಬಳಿಯ ವ್ಯಕ್ತಿ ಇದುವರೆಗೂ ಶೇಖರಿಸಿದ್ದ ಒಂದು ರೂಪಾಯಿ ನೋಟು ಗಳನ್ನು ಎಣಿಸುತ್ತಾನೆ. ಅಷ್ಟರಲ್ಲಿ ಸ್ಟೆತಾಸ್ಕೋಪ್ ಹಾಕಿ ಕೊಂಡಿದ್ದ ಡಾಕ್ಟರ್ ಮನೆಯಿಂದ ಹೊರಗೆ ಬಂದು, ಯಾರೂ ಇಲ್ಲವೆಂದು ಖಚಿತಪಡಿಸಿಕೊಂಡು, ಗೇಟಿನ ಬಳಿಯಿದ್ದ ವ್ಯಕ್ತಿಯನ್ನು ಆತ್ಮೀಯವಾಗಿ ಮನೆಯೊಳಗೆ ಕರೆದುಕೊಂಡು ಹೋಗುತ್ತಾನೆ. ಆಗಾಗ ತೇಲಿಬರುವ ನಗುವಿನೊಂದಿಗೆ ಬೆಳಕು ನಿಧಾನವಾಗಿ ಕ್ಷೀಣಿಸುತ್ತದೆ.

## ೮

ರಂಗದ ಮೇಲೆ ನೀಲಿಯ ಮಂದಬೆಳಕು ಆವರಿಸುತ್ತದೆ. ಜಾಹಿರಾತು ಬಟ್ಟೆಯನ್ನು ಸುತ್ತಿಕೊಂಡಿದ್ದ ಯುವಕ ಗಂಭೀರವಾಗಿ ನಿಂತಿರುತ್ತಾನೆ. ಅವನ ಮುಖದಲ್ಲಿ ಕಠೋರತೆ ಮೂಡುತ್ತದೆ. ತಾನು ಸುತ್ತಿಕೊಂಡಿದ್ದ ಜಾಹಿರಾತು ಬಟ್ಟೆಯನ್ನು ಬಿಚ್ಚಿ ಪಕ್ಕಕ್ಕೆ ಎಸೆಯುತ್ತಾನೆ. ನೀಲಿ ಬೆಳಕಿನ ಪ್ರಕಾಶ ಬದಲಾಗುತ್ತದೆ. ಹಿನ್ನೆಲೆಯಲ್ಲಿ ಯಾರೋ ಬರುವ ಸದ್ದಾಗುವುದು. ತತ್‌ಕ್ಷಣ ಅಶೋಕ ಸ್ಥಂಭದ ಹಿಂದೆ ಹೋಗಿ ಅಡಗಿಕೊಳ್ಳುತ್ತಾನೆ. ಹಿಂದೆ ಕಿಟಕಿ-ರಂಗಸ್ಥಳದಲ್ಲಿ ಕಾಣಿಸಿಕೊಂಡಿದ್ದ ಮಾರ್ವಾಡಿ, ಕೈಯಲ್ಲಿ ಪೊಟ್ಟಣ ಹಿಡಿದುಕೊಂಡು, ಇರುವೆಗೂಡುಗಳಿಗೆ ಸಕ್ಕರೆಯನ್ನು ಉದುರಿಸುತ್ತಾ ಬರುತ್ತಾನೆ. ಮಾರ್ವಾಡಿ ಆಶೋಕಸ್ಥಂಭದ ಹತ್ತಿರ ಬರುವವರೆಗೂ ಸುಮ್ಮನಿದ್ದು, ಕೂಡಲೆ ಮರೆಯಲ್ಲಿದ್ದ ಯುವಕ ಹಾರಿಬಂದು ಮಾರ್ವಾ

ಟಿಪ್ಪಣಿ

ಟಿಪ್ಪಣಿ

ಡಿಯ ಬಾಯನ್ನು ಮುಚ್ಚಿ ಅಶೋಕಸ್ತಂಭದ ಹಿಂದಕ್ಕೆ ಎಳೆದುಕೊಂಡು ಹೋಗುತ್ತಾನೆ. ನಿಶ್ಶಬ್ದ ಆವರಿಸುತ್ತದೆ. ಅನಂತರ ಹಿಂದೆ ಕಾಣೆಸಿಕೊಂಡಿದ್ದ ಡಾಕ್ಟರ್ ಬಿಳಿ ನೆಟ್ ಬನೀನ್, ನಿಕ್ಕರ್ ಮತ್ತು ಕ್ಯಾನ್‌ವಾಸ್ ಷೂಸ್ ಧರಿಸಿ ಓಡಿ ಬರುತ್ತಾನೆ. ಅಶೋಕಸ್ತಂಭದ ಬಳಿ ನಿಂತು, ಬೆಳಗಿನ ವ್ಯಾಯಾಮವನ್ನು ಮುಂದುವರೆಸುತ್ತಾನೆ. ಹಿಂದೆ ಅಡಗಿಕೊಂಡಿದ್ದ ಯುವಕ ಸಮಯವನ್ನು ಕಾದು ಡಾಕ್ಟರ್‌ನನ್ನು ಅಶೋಕಸ್ತಂಭದ ಹಿಂದಕ್ಕೆ ಎಳೆದುಕೊಂಡು ಹೋಗುತ್ತಾನೆ. ನಿಶ್ಶಬ್ದ ಆವರಿಸುತ್ತದೆ. ಅನಂತರ ಜಮೀನ್ದಾರ ಮತ್ತು ರಾಜಕಾರಣಿ ಬೆಳಗಿನ ವಾಯುವಿಹಾರಕ್ಕೆ ವಿರುದ್ಧ ದಿಕ್ಕಿನಲ್ಲಿ ಬಂದು, ಅಲ್ಲಿನ ಬೆಂಚಿನ ಮೇಲೆ ಕೂಡುತ್ತಾರೆ. ಒಬ್ಬರಿಗೊಬ್ಬರ ಪರಿಚಯವಿಲ್ಲದ್ದರಿಂದ, ಜಮೀನ್ದಾರ ಮೀಸೆಯನ್ನು ತಿರುವುತ್ತಾ ಉದ್ಯಾನದ ಅಂದಚೆಂದವನ್ನು ನೋಡುತ್ತಿರುತ್ತಾನೆ. ರಾಜಕಾರಣಿ ಜೇಬಿನಲ್ಲಿದ್ದ ಪತ್ರಿಕೆಯನ್ನು ಹೊರತೆಗೆದು ಓದಲು ಪ್ರಾರಂಭಿಸುತ್ತಾನೆ. ಹಿಂದೆ ಅಡಗಿಕೊಂಡಿದ್ದ ಯುವಕ ಜಿಗಿದು ಇವರ ಮುಂದೆ ನಿಲ್ಲುತ್ತಾನೆ. ಅವನ ಕೈಯಲ್ಲಿ ಪಿಸ್ತೂಲು ಇರುತ್ತದೆ. ಜಮೀನ್ದಾರ ಮತ್ತು ರಾಜಕಾರಣಿ ಭಯದಿಂದ ಎದ್ದು ನಿಲ್ಲುತ್ತಾರೆ. ಅವರನ್ನೂ ಅಶೋಕಸ್ತಂಭದ ಹಿಂದಕ್ಕೆ ಕರೆದುಕೊಂಡು ಹೋಗುತ್ತಾನೆ. ನಿಶ್ಶಬ್ದ ಆವರಿಸುತ್ತದೆ.

ಹಿನ್ನೆಲೆಯಲ್ಲಿ ಶವಸಂಸ್ಕಾರ ಗತಿಯ ತಮಟೆಯ ಸದ್ದು ನಿಧಾನವಾಗಿ ಮೂಡಿಬಂದು ಹೆಚ್ಚಾಗುತ್ತದೆ. ಅದರಂತೆ ರಂಗದ ಮೇಲೆ ನಿಧಾನವಾಗಿ ಬೆಳಕಿನ ಬಣ್ಣ ಕೆಂಪಾಗುತ್ತದೆ. ಆಗ ಅಶೋಕಸ್ತಂಭದ ಹಿಂದಿನಿಂದ ಮಾರ್ವಾಡಿ, ಡಾಕ್ಟರ್, ಜಮೀನ್ದಾರ ಮತ್ತು ರಾಜಕಾರಣಿ ಸಣ್ಣ ಸಣ್ಣ ಹೂವಿನ ಕುಂಡಗಳನ್ನು ಎತ್ತಿಕೊಂಡು ಬರುತ್ತಾರೆ. ಹಿನ್ನೆಲೆಯ ತಮಟೆಯ ಧ್ವನಿಗೆ ಅವರ ಕಾಲಿನ ಗತಿ

ಹೊಂದಿಕೊಳ್ಳುವುದು. ಅನಂತರ ಅಶೋಕಸ್ತಂಭಕ್ಕೆ ಪೂರುಸುತ್ತಾ ಬಂದು. ಒಬ್ಬೊಬ್ಬರಾಗಿ ಹೊತ್ತಿದ್ದ ಕುಂಡವನ್ನು ಕೆಳಕ್ಕೆ ಹಾಕಿ, ಹಿಂತಿರುಗಿ ನೋಡದೆ ನಡೆಯುತ್ತಾರೆ. ಪಿಸ್ತೂಲ್ ಹಿಡಿದ ಯುವಕ ಅನಂತರ ಅವರನ್ನು ಹಿಂಬಾಲಿಸುತ್ತಾನೆ. ತಮಟೆಯ ಶಬ್ದ ಕ್ಷೀಣಿಸುತ್ತದೆ. ಹಾಗೆಯೇ ಬೆಳಕೂ ಕ್ಷೀಣಿಸುತ್ತದೆ.

-ತೆರೆ-

ಟಿಪ್ಪಣಿ

ನಾಟಕದಲ್ಲಿ ಅಭಿನಯಕ್ಕೆ ಇರಬೇಕಾದ ಸ್ಥಾನವನ್ನು
ಸಂಭಾಷಣೆಯೇ ಆಕ್ರಮಿಸಿ ಸುಂದರವಾಗಿ ಮಾತನಾಡು
ವುದೇ ನಟನೆಯೆಂಬ ಭ್ರಮೆ ಪ್ರಚಲಿತವಾಗುತ್ತಿರುವ
ಈ ದಿನಗಳಲ್ಲಿ ಮೂಕ ನಾಟಕಗಳು ನಟರಿಗೆ ಹೊಸ
ಸವಾಲುಗಳನ್ನು ಒಡ್ಡುತ್ತವೆ.

ನಮ್ಮ ಪ್ರಸ್ತುತ ಸಾಮಾಜಿಕ ಸ್ಥಿತಿ-ಗತಿಗಳ ವಿಷಯ
ದಲ್ಲಿ ಅತೃಪ್ತಿ ಮತ್ತು ಪರಿವರ್ತನೆಯಾಗಬೇಕಾದ
ಮಾರ್ಗದ ಸ್ಪಷ್ಟಸೂಚನೆಗಳು ಇಲ್ಲಿನ ಎಲ್ಲ ನಾಟಕ
ಗಳಲ್ಲೂ ಕಂಡುಬರುತ್ತದೆ.

ಪ್ರತಿಯೊಂದು ಚಿಕ್ಕ ವಿವರ ಕೂಡಾ ಸಂಕೇತವಾಗಿ,
ಕಲಾತ್ಮಕವಾಗಿ ಪರಿವರ್ತನೆಯಾಗುವುದು ಇಲ್ಲಿನ
ಅಭಿವ್ಯಕ್ತಿ ಕ್ರಮದ ವೈಶಿಷ್ಟ್ಯ.

ಪಿ. ಪಿ. ಪ್ರಕಾಶನ ★ ಬೆಂಗಳೂರು-೫೬೦ ೦೦೪